






ಕೊಂಡಜ್ಜಿ ಬಸಪ್ಪರವರ ಜನ್ಮಶತಮಾನೋತ್ಸವ ಸ್ಮರಣಾರ್ಥ

## 27ನೇ ರಾಜ್ಯ ಸ್ಕೌಟ್ಸ್ ಮತ್ತು ಗೈಡ್ಸ್ ಜಾಂಬೋರೇಟ್

# ನಿಸರ್ಗ

ಜಾಂಬೋರೇಟ್ ಸ್ಮರಣ ಸಂಚಿಕೆ

# 'ಹಸಿರು' ವಸ್ತುಗಳನ್ನೇ ಖರೀದಿಸಿ ಮಾಲಿನ್ಯ ನಿಯಂತ್ರಣಕ್ಕೆ ಸಹಕರಿಸಿ

ಹಸುರು ಬದುಕಿನಲ್ಲಿ ಖುಷಿಯಿದೆ; ನೆಮ್ಮದಿ ಇದೆ. ಈ ಭೂಮಿಗೆ ರಕ್ಷಣೆ ಇದೆ



ಡಾ॥ ವಾಮನ್ ಆಚಾರ್ಯ
ಅಧ್ಯಕ್ಷರು
ಕರ್ನಾಟಕ ರಾಜ್ಯ ಮಾಲಿನ್ಯ ನಿಯಂತ್ರಣ ಮಂಡಳಿ

## ಏನಿದು ಹಸುರು ಬಳಕೆ?

- ನಮ್ಮ ನಿತ್ಯ ಜೀವನದ ಅಗತ್ಯಗಳಿಗಾಗಿ ದಿನವೂ ಏನೆಲ್ಲ ಖರೀದಿಸುತ್ತೇವೆ.. ಆಹಾರ ಪದಾರ್ಥಗಳು, ಮನೆ ಬಳಕೆಯ ವಸ್ತುಗಳು, ಉಡುಗೆ-ತೊಡುಗೆಗಳು, ಸಾಧನ ಸಲಕರಣೆಗಳು, ವಾಹನಗಳು, ಗ್ರಾಹಕ ಬಳಕೆಯ ಉತ್ಪನ್ನಗಳು... ಇವೆಲ್ಲವೂ ಬಳಕೆಯಾದ ಮೇಲೆ ಎಲ್ಲಿಗೆ ಹೋಗುತ್ತವೆ? ಒಮ್ಮೆ ಯೋಚಿಸಿ. ಮರುಬಳಕೆಯಾಗಿಯೋ, ವಿಷ ಉಣಿಸದೆ ನೆಲದಲ್ಲಿ ಕರಗಿಯೋ ಇವೆಲ್ಲ ವಸ್ತುಗಳೂ ವಿಲೇವಾರಿ ಆಗುವಂತಿದ್ದರೆ ಎಷ್ಟು ಚೆನ್ನಾಗಿರುತ್ತದೆ ಅಲ್ಲವೆ? ಹೀಗೆ ಮಾಲಿನ್ಯವನ್ನು ನಿಯಂತ್ರಿಸುವ, ಪರಿಸರ ರಕ್ಷಿಸುವ, ನಮ್ಮ ಆರೋಗ್ಯವನ್ನೂ ಕಾಪಾಡುವ ಹಾಗೆ ಬದುಕನ್ನು ರೂಪಿಸಿಕೊಳ್ಳುವುದೇ ಹಸುರು ಬಳಕೆ.

## ಹಸುರು ಬದುಕಿಗೆ ನೀವೇನು ಮಾಡಬೇಕು?

- ಪ್ರತಿದಿನ ಖರೀದಿಗೆ ಮನೆಯಿಂದ ಹೊರಡುವಾಗಲೇ ಏನು ಬೇಕು ಎಂಬುದನ್ನು ಪಟ್ಟಿ ಮಾಡಿಕೊಳ್ಳಿ; ವಸ್ತುಗಳನ್ನು ತರಲು ಬಟ್ಟೆಯ ಚೀಲವನ್ನು ಇಟ್ಟುಕೊಂಡೇ ಹೊರಡಿ.
- ಖರೀದಿ ಮಾಡುವಾಗ ದೊಡ್ಡ ಅಥವಾ ಮರುಬಳಕೆ ಮಾಡಬಹುದಾದ ಪ್ಯಾಕುಗಳನ್ನೇ ಖರೀದಿಸಿ.
- ಸ್ಥಳೀಯ ತರಕಾರಿ, ದಿನಸಿ ಉತ್ಪನ್ನಗಳನ್ನೇ ಖರೀದಿಸಿ; ಸರಕು ಸಾಗಾಟ ಕಡಿಮೆ ಮಾಡಿದಷ್ಟೂ ಪರಿಸರಕ್ಕೆ ಉತ್ತಮ.
- ನಿತ್ಯಜೀವನದಲ್ಲಿ ರಾಸಾಯನಿಕಗಳ ಬಳಕೆ ಕಡಿಮೆ ಮಾಡಿ. ಬದಲಿಗೆ, ಈಗ ಮಾರುಕಟ್ಟೆಯಲ್ಲಿ ಸಿಗುವ ನೂರಾರು ನಿಸರ್ಗದತ್ತ ಉತ್ಪನ್ನಗಳನ್ನು ಆಯ್ಕೆ ಮಾಡಿಕೊಳ್ಳಿ.
- ಜೈವಿಕ ಇಂಧನದ ಬಳಕೆಗಾಗಿ ನೀವೂ ಮುಂದಾಗಿ; ಪಾಳು ಜಾಗದಲ್ಲಿ, ಬೀದಿ ಬದಿಯಲ್ಲಿ ಜೈವಿಕ ಇಂಧನ ಕೊಡುವ ಗಿಡಮರಗಳನ್ನು ಬೆಳೆಯಿರಿ.
- ಆದಷ್ಟೂ ಪ್ಲಾಸ್ಟಿಕ್ ಬಳಕೆಯನ್ನು ತಗ್ಗಿಸಿ; ತ್ಯಾಜ್ಯಗಳನ್ನು ಮರುಬಳಕೆಗೆ ಕೊಡಿ.
- ಕಚೇರಿಯಲ್ಲಿ ಕಾಗದದ ಬಳಕೆಯನ್ನು ಮಿತಗೊಳಿಸಿ. ಪ್ರಿಂಟ್ ತೆಗೆಯಲೇ ಬೇಕಾದಾಗ ಎರಡೂ ಬದಿ ಬಳಸಿ.
- ಮನೆ-ಕಚೇರಿಗಳಲ್ಲಿ ವಿದ್ಯುತ್ ಬಳಕೆ ನಿಯಂತ್ರಿಸಿ; ಸಿಎಫ್‌ಎಲ್/ಎಲ್‌ಇಡಿ ಬಲ್ಬುಗಳನ್ನು ಬಳಸಿ. ಸ್ನಾನಕ್ಕಾಗಿ ಸೌರ ಶಕ್ತಿಯ ವಾಟರ್ ಹೀಟರ್ ಬಳಸಿ.
- ಮನೆಯ, ಕಚೇರಿಯ ಕಸವನ್ನು ವಿಂಗಡಿಸಿ, ಮರುಬಳಕೆಗೆ ಕೊಡಿ. ಗ್ರಾಹಕರಾದ ನಾವು ಕಸವನ್ನೂ ನಿರ್ವಹಣೆ ಮಾಡಿದಾಗಲೇ ಹಸುರು ಬಳಕೆದಾರರಾಗುತ್ತೇವೆ!

ಹಸುರು ಖರೀದಿ
ಸಂಸ್ಕೃತಿ ಬೆಳೆಸಿಕೊಳ್ಳೋಣ.

ಕೊಳ್ಳುಬಾಕ ಪ್ರವೃತ್ತಿಗೆ
ಕಡಿವಾಣ ಹಾಕೋಣ.

ನಿಸರ್ಗದೊಂದಿಗೆ
ಸಹಬಾಳ್ವೆ ನಡೆಸೋಣ

ಪರಿಸರ ಮಾಲಿನ್ಯಕ್ಕೆ
ವಿದಾಯ ಹೇಳೋಣ!

ಮಂಡಳಿಯ ಫೇಸ್‌ಬುಕ್
ಪುಟಕ್ಕೆ ಭೇಟಿ ನೀಡಿ
www.facebook.com/kspcbofficial




ಸಾರ್ವಜನಿಕ ಹಿತದೃಷ್ಟಿಯಿಂದ ಪ್ರಕಟಿಸಿದವರು

**ಕರ್ನಾಟಕ ರಾಜ್ಯ ಮಾಲಿನ್ಯ ನಿಯಂತ್ರಣ ಮಂಡಳಿ**

ಪರಿಸರ ಭವನ, ಚರ್ಚ್ ಸ್ಟ್ರೀಟ್, ಬೆಂಗಳೂರು 560001

www.kspcb.gov.in



ಗ್ರಾಮೀಣಾಭಿವೃದ್ಧಿ ಮತ್ತು
ಪಂಚಾಯತ್ ರಾಜ್ ಇಲಾಖೆ



ಕರ್ನಾಟಕ ರೂರಲ್ ಇನ್‌ಫ್ರಾಸ್ಟ್ರ
ಡೆವಲಪ್‌ಮೆಂಟ್ ಲಿಮಿಟೆಡ್

ಶ್ರೀ ಎಚ್.ಕೆ. ಪಾಟೀಲ
ಮಾನ್ಯ ಗ್ರಾಮೀಣಾಭಿವೃದ್ಧಿ ಮತ್ತು
ಪಂಚಾಯತ್ ರಾಜ್ ಸಚಿವರು

ಶ್ರೀ ಸಿದ್ಧರಾಮಯ್ಯ
ಸನ್ಮಾನ್ಯ ಮುಖ್ಯಮಂತ್ರಿಗಳು

ಶ್ರೀ ಶ್ರೀಶೈಲ ಎಂ. ದಳವಾಯಿ
ಅಧ್ಯಕ್ಷರು, ಕೆಆರ್‌ಐಡಿಎಲ್

# ನಾಡು ನಿರ್ಮಾಣದ ಹಾದಿಯಲ್ಲಿ ಪ್ರಗತಿಯ ದಾಪುಗಾಲು

ಮುಖ್ಯಮಂತ್ರಿಗಳ
ರತ್ನ ಪ್ರಶಸ್ತಿ
ಪುರಸ್ಕೃತ ಸಂಸ್ಥೆ

















ಗ್ರಾಮೀಣ ಮೂಲ ಸೌಕರ್ಯ ನಿರ್ಮಾಣ,
ಯಶಸ್ವಿ ನಿರ್ವಹಣೆ

## ಕರ್ನಾಟಕ ರೂರಲ್ ಇನ್‌ಫ್ರಾಸ್ಟ್ರಕ್ಚರ್ ಡೆವಲಪ್‌ಮೆಂಟ್ ಲಿಮಿಟೆಡ್

ಕರ್ನಾಟಕ ಗ್ರಾಮೀಣ ಮೂಲಭೂತ ಸೌಕರ್ಯ ಅಭಿವೃದ್ಧಿ ನಿಯಮಿತ ಸಂಸ್ಥೆಯು, ಕರ್ನಾಟಕ ಸರ್ಕಾರದ ಅಂಗಸಂಸ್ಥೆಯಾಗಿದೆ. ರಾಜ್ಯ ಸರ್ಕಾರದ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಇಲಾಖೆಯ ಸಹಯೋಗದಡಿ ಕಾರ್ಯ ನಿರ್ವಹಿಸುತ್ತಿದ್ದು, ಗ್ರಾಮೀಣ ಜನರಿಗೆ ಮೂಲಭೂತ ಸೌಕರ್ಯ ಕಲ್ಪಿಸುವಲ್ಲಿ ಕೆಆರ್‌ಐಡಿಎಲ್ ಪ್ರಮುಖ ಪಾತ್ರ ವಹಿಸುತ್ತಿದೆ.

ಸರ್ಕಾರದ ಯೋಜನೆಗಳ ಪೂರ್ಣ ಲಾಭವನ್ನು ಜನರಿಗೆ ಸೇರುವಂತೆ ಸಂಸ್ಥೆಯೇ ನೇರವಾಗಿ ಕಾರ್ಯನಿರ್ವಹಿಸಿ ಗ್ರಾಮೀಣ ಜನತೆಯ ಅವಶ್ಯಕತೆಗನುಗುಣವಾಗಿ ತಕ್ಷಣವೇ ಸ್ಪಂದಿಸಿ ಜನರ ವಿಶ್ವಾಸಾರ್ಹತೆಯ ನಂಬಿಕೆಯನ್ನು ನಿರ್ಮಾಣ ಕಾರ್ಯಗಳಲ್ಲಿ ಸಹಕಾರಗೊಳಿಸಿ ಮಾನವ ಶಕ್ತಿಯನ್ನು ನಿರ್ಮಾಣ ಕಾರ್ಯದಲ್ಲಿ ಸದಾ ತೊಡಗಿಸಿಕೊಂಡು, ಗ್ರಾಮೀಣಾಭಿವೃದ್ಧಿ ಉದ್ಯೋಗಾಧಾರಿತ ಕಾಮಗಾರಿಗಳನ್ನು ನಿರ್ವಹಿಸುವ ಮೂಲಕ ಸ್ಥಳೀಯ ನಿರುದ್ಯೋಗಿಗಳಿಗೆ ಕೆಲಸವನ್ನು ಒದಗಿಸುವ ಧ್ಯೇಯದೊಂದಿಗೆ ಗ್ರಾಮೀಣ ಜನತೆಯ ಸಾಮಾಜಿಕ ಮತ್ತು ಆರ್ಥಿಕ ಪರಿಸ್ಥಿತಿಯನ್ನು ಸದೃಢಗೊಳಿಸುತ್ತಿದೆ.

ಸಂಸ್ಥೆಯು ಸಮಾಜ ಕಲ್ಯಾಣ ಇಲಾಖೆ, ಬೆಂಗಳೂರು ಮೆಟ್ರೋ, ಬಿಬಿಎಂಪಿ, ತಾಂಡ ಅಭಿವೃದ್ಧಿ, ಯುವಜನ ಸೇವಾ ಇಲಾಖೆ ಸೇರಿದಂತೆ ರಾಜ್ಯದ ಪ್ರಮುಖ ಇಲಾಖೆಗಳ ಕಾಮಗಾರಿಗಳನ್ನು ನಿರ್ವಹಿಸುತ್ತಿದೆ. ಉತ್ತಮ ಕಾರ್ಯಕ್ಷಮತೆಯಿಂದ ಕಾಮಗಾರಿಗಳನ್ನು ನಿರ್ಮಿಸುವ ಖ್ಯಾತಿ ಸಂಸ್ಥೆಯದಾಗಿದೆ. ವಿವಿಧ ಇಲಾಖೆಗಳಿಂದ ವಹಿಸಿದ ಕಾಮಗಾರಿಗಳನ್ನು ಶಿಸ್ತು, ದಕ್ಷತೆ ಮತ್ತು ಸಮಯಪ್ರಜ್ಞೆಯಿಂದ ನಿರ್ಮಿಸಿದ ಕಾರಣ ರಾಜ್ಯ ಸರ್ಕಾರದ ವ್ಯಾಪ್ತಿಗೆ ಸುಮಾರು 3750 ಸ್ಥಿರಾಸ್ತಿಗಳ ಲಭ್ಯತೆಯಾಗಿದ್ದು, 2013–14 ನೇ ಸಾಲಿಗೆ 1360 ಕೋಟಿ ರೂ. ವಹಿವಾಟು ಸಾಧಿಸಿದೆ.

- ಶುದ್ಧ ಕುಡಿಯುವ ನೀರಿನ ಯೋಜನೆಯಡಿ 1000 ಘಟಕಗಳು ಪೂರ್ಣಗೊಳ್ಳುವ ಹಂತದಲ್ಲಿವೆ.
- ಸುವರ್ಣ ಗ್ರಾಮ ಯೋಜನೆಯಡಿ 650 ಗ್ರಾಮಗಳಲ್ಲಿ 647 ಕಿ.ಮೀ ಸಿ.ಸಿ. ರಸ್ತೆ, 170 ಕಿ.ಮೀ ಸಿ.ಸಿ. ಚರಂಡಿ, 26 ಅಂಗನವಾಡಿ ಕಟ್ಟಡಗಳು, 52 ಸಮುದಾಯ ಭವನಗಳ ಕಾಮಗಾರಿಗಳು ಪೂರ್ಣಗೊಂಡಿವೆ.
- ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಯ ವಿವಿಧ ಕಾಮಗಾರಿಗಳಾದ ರಸ್ತೆ ಅಗಲೀಕರಣ, ಡಾಂಬರೀಕರಣ, ಪಾದಚಾರಿ ರಸ್ತೆ, ಉದ್ಯಾನವನ, ಒಳಚರಂಡಿ, ಶೌಚಾಲಯ, ಸಮುದಾಯ ಭವನ ಮತ್ತು ಬಸ್ ನಿಲ್ದಾಣಗಳು ಸೇರಿದಂತೆ ಒಟ್ಟು 2177 ಕಾಮಗಾರಿಗಳು ಪೂರ್ಣಗೊಂಡಿವೆ
- ಬೆಂಗಳೂರು ಮೆಟ್ರೋ ರೈಲು ನಿಗಮ ನಿಯಮಿತ ಸಂಸ್ಥೆಯ 20 ರಸ್ತೆ ಅಭಿವೃದ್ಧಿ, ಚರಂಡಿ ನಿರ್ಮಾಣ ಕಾಮಗಾರಿಗಳು ಪೂರ್ಣಗೊಂಡಿವೆ.

**ಎಚ್.ಪಿ. ಪ್ರಕಾಶ್**, ಭಾ.ಅ.ಸೇ
ವ್ಯವಸ್ಥಾಪಕ ನಿರ್ದೇಶಕರು

**ಟಿ.ಎಂ. ವಿಜಯ್‌ಭಾಸ್ಕರ್**, ಭಾ.ಆ.ಸೇ.
ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿಗಳು, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ

ಗ್ರಾಮೀಣಾಭಿವೃದ್ಧಿ ಭವನ, ಆನಂದರಾವ್ ವೃತ್ತ, ಬೆಂಗಳೂರು – 560 009, ದೂರವಾಣಿ : (080)-22879900, E-mail: mdkridl@gmail.com, Website: kridl.gov.i



ಜಾಗತಿಕ ಸ್ವರ್ಣ ಕೌನ್ಸಿಲ್‌ನ

ಶಿಲೆಯೊಳಗೆ ಅರಳಿದ ಕಾಂತಿಭರಿತ

# ಚಿನ್ನ

ಹಟ್ಟಿ ಚಿನ್ನದ ಗಣಿಯಲ್ಲಿ ಅಶೋಕನ ಕಾಲಕ್ಕಿಂತಲೂ ಮೊದಲೇ ಇಲ್ಲಿ ಗಣಿಗಾರಿಕೆ ನಡೆದಿರುವುದು ಪತ್ತೆಯ ದಾಖಲಾತಿಯ ಪ್ರಕಾರ ಹೇಳುವುದಾದರೆ, 1880-1920ರಲ್ಲಿ ಹೈದರಾಬಾದ್ ಡೆಕ್ಕನ್ ಕಂಪನಿಯೊಂದಿ ಜಾನ್ ಟೈಲರ್ ಮತ್ತು ಮಕ್ಕಳು ಆಧುನಿಕ ಗಣಿಗಾರಿಕೆಯನ್ನು ಕೈಗೊಂಡರು. 1947ರಲ್ಲಿ ಹೈದರಾಬಾದ್ ಚಿನ್ನದ ಗಣಿ ಕಂಪನಿ ನಿಯಮಿತವನ್ನು ಸಂಘಟಿಸಿ ಕೆಲಸ ಮುಂದುವರೆಸಿತಾದರೂ, 1956ರಲ್ಲಿ ರಾಜ್ಯಗಳ ಪು ವಿಂಗಡಣೆಯಿಂದ ಮೈಸೂರು (ಈಗಿನ ಕರ್ನಾಟಕ) ರಾಜ್ಯ ಉದಯವಾದಾಗ ಅದರ ಹೆಸರನ್ನು ಅದಿ ಹಟ್ಟಿ ಚಿ ಗಣಿ ಕಂಪನಿ ನಿಯಮಿತವೆಂದು ಮರುನಾಮಕರಣ ಮಾಡಲಾಯಿತು. 1971ನೇ ವರ್ಷದಲ್ಲಿ ಉತ್ಪಾದನೆಯ 800 ಟನ್ನುಗಳಿಂದ 910 ಟನ್ನುಗಳಿಗೆ ಹೆಚ್ಚಿಸಲಾಯಿತು. ಇಂದು ಹಟ್ಟಿ ಗಣಿಗಾರಿಕೆಯು 528.35 ಹೆಕ್ಟೇರ್ ಪ್ರದೇಶವನ್ನು ಆವರಿಸಿದ್ದು, 84,670ಕೆ.ಜಿ.ಯಷ್ಟು ಚಿನ್ನವನ್ನು ಉತ್ಪಾದಿಸುತ್ತಿದೆ. ಇಂದು ಹಟ್ಟಿ ಗಣಿಗಾರಿಕೆಯು ಹೆಕ್ಟೇರ್ ಭೂ ಪ್ರದೇಶವನ್ನು ಆವರಿಸಿದ್ದು, 86,252ಕೆ.ಜಿ.ಯಷ್ಟು ಚಿನ್ನವನ್ನು ಉತ್ಪಾದಿಸುತ್ತಿದ್ದು, ಇಲ್ಲಿಯವರೆ 21.93 ಮಿಲಿಯನ್ ಟನ್‌ಗಳಷ್ಟು ಅದಿರು ಗಣಿಗಾರಿಕೆ ಮಾಡಿದೆ.

## ನಮ್ಮ ಪರಿಸರ ಕಾಳಜಿ



### ಭಾರತದಲ್ಲೇ ಪ್ರಮುಖ ಜೈವಿಕ-ಇಂಧನ ಆರಂಭಿಕದಾರರಾಗಿದ್ದೇವೆ

- ಚಿತ್ರದುರ್ಗ ಚಿನ್ನದ ಘಟಕದಲ್ಲಿ 11.40 ಮೆ.ವ್ಯಾ. ಸಾಮರ್ಥ್ಯದ ಗಾಳಿ ಯಂತ್ರವನ್ನು ಸ್ಥಾಪಿಸಿದೆ
- ಪರಿಸರ ನಿರ್ವಹಣೆಗಾಗಿ ಉದ್ಯಾನವನಗಳ ಅಭಿವೃದ್ಧಿ, ಅರಣ್ಯೀಕರಣ, ಪರಿಸರ ಪ್ರಯೋಗಾಲಯಗಳ ಸ್ಥಾಪನೆ ಮತ್ತು ಸೆಲ್‌ಗಳು
- ನೀರು, ಇಂಧನ, ಅರಣ್ಯ, ತ್ಯಾಜ್ಯ ನಿರ್ವಹಣೆ, ಮಳೆ ನೀರು ಕೊಯ್ಲು, ಇವುಗಳ ಬಗ್ಗೆ ಶಾಲಾಕಾಲೇಜುಗಳಲ್ಲಿ ಜಾಗೃತಿ ಅಭಿಯಾನವನ್ನು ನಡೆಸುವುದು
- ಉತ್ತರ ಕರ್ನಾಟಕಕ್ಕಾಗಿ 43.21 ಹೆಕ್ಟೇರಿನಲ್ಲಿ ಜೈವಿಕ ಇಂಧನ ಪಾರ್ಕ್‌ನ್ನು ಸ್ಥಾಪಿಸಿದೆ
- ಪಳೆಯುಳಿಕೆ ಇಂಧನಗೆ ಪರ್ಯಾಯವಾಗಿ ತ್ಯಾಜ್ಯವನ್ನು ಬಳಸಿ ಜೈವಿಕ ಡೀಸೆಲ್ ಉತ್ಪಾದನಾ ಸ್ಥಾವರವನ್ನು ಸ್ಥಾಪಿಸುವುದು

## ನಮ್ಮ ಸಾಮಾಜಿಕ ಜವಾಬ್ದಾರಿ



### ತೃಣಮೂಲದಿಂದಲೂ ಅಭಿವೃದ್ಧಿಯನ್ನು ಸಾಧಿಸುತ್ತ ಬಂದಿದೆ

- ಶೈಕ್ಷಣಿಕ ವಿದ್ಯಾಕೇಂದ್ರಗಳನ್ನು ನಿರ್ಮಿಸುವುದರೊಂದಿಗೆ 10,500 ವಿದ್ಯಾರ್ಥಿಗಳಿಗೆ ವಿದ್ಯಾಭ್ಯಾಸವನ್ನು ಒದಗಿಸಿದೆ
- ಹಟ್ಟಿ ಸುತ್ತಮುತ್ತಲಿನ ಗ್ರಾಮಗಳಿಗೆ ಕುಡಿಯುವ ನೀರಿನ ಸೌಕರ್ಯವನ್ನು ಒದಗಿಸಿದೆ
- ಹಟ್ಟಿಯಲ್ಲಿ ಸಮುದಾಯ ಶೌಚಾಲಯಗಳನ್ನು ನಿರ್ಮಿಸುವುದು ಮತ್ತು ಉಟಿ ಹಾಗೂ ಹಿರಾ-ಬುದ್ದಿನಿ ಗ್ರಾಮಗಳಲ್ಲಿ ಮೂಲಭೂತ ಸೌಕರ್ಯಗಳ ಅಭಿವೃದ್ಧಿ
- ಹಟ್ಟಿಯಲ್ಲಿ ಬಸ್ ನಿಲ್ದಾಣವನ್ನು ಸ್ಥಾಪಿಸಿದೆ
- ಪ್ರವಾಹ ಪೀಡಿತ ಸಂತ್ರಸ್ತರಿಗಾಗಿ 900 ಮನೆಗಳನ್ನು ನಿರ್ಮಿಸಿಕೊಟ್ಟಿದೆ
- ಹಟ್ಟಿಯಲ್ಲಿ ಕೇಂದ್ರೀಯ ವಿದ್ಯಾಲಯ ಶಾಲೆಯನ್ನು ಸ್ಥಾಪಿಸಿದೆ
- 250 ಕೋಟಿ ವೆಚ್ಚದಲ್ಲಿ 3 ತಾಲ್ಲೂಕುಗಳ ಅಭಿವೃದ್ಧಿಗೆ ಮಾಸ್ಟರ್ ಪ್ಲಾನ್ ರೂಪಿಸಿದೆ




**ದಿ ಹಟ್ಟಿ ಚಿನ್ನದ ಗಣಿ ಕಂಪನಿ ನಿಯಮಿತ**
(ಕರ್ನಾಟಕ ಸರ್ಕಾರದ ಒಂದು ಉದ್ಯಮ)
ಹಟ್ಟಿ 584115, ರಾಯಚೂರು ಜಿಲ್ಲೆ, ಕರ್ನಾಟಕ, ಭಾರತ.
ದೂರವಾಣಿ: +91-8537-275022
ನೋಂದಣಿ ಕಛೇರಿ:
3ನೇ ಮಹಡಿ, ಕೆಹೆಚ್‌ಬಿ ನ್ಯೂ ಶಾಪಿಂಗ್ ಕಾಂಪ್ಲೆಕ್ಸ್,
ರಾಷ್ಟ್ರೀಯ ಕ್ರೀಡಾ ಗ್ರಾಮ, ಕೋರಮಂಗಲ (ಅಂಚೆ),
ಬೆಂಗಳೂರು - 560047, ಭಾರತ.
ದೂರವಾಣಿ: +91-80-25705723/25705725
ಇ-ಮೇಲ್: hgml@vsnl.com

www.huttigold.co.in

# ನಿಸರ್ಗ




ಉದ್ದೇಶ: "ನೆಲ ಜಲ ರಕ್ಷಣೆ, ನಮ್ಮ ಹೊಣೆ"

## ಸ್ಮರಣ ಸಂಚಿಕೆ

## ೨೭ನೆಯ ಕರ್ನಾಟಕ ರಾಜ್ಯ ಜಾಂಬೊರೇಟ್

17-23 ಜನವರಿ 2015,

ಡಾ|| ಅನಿಬೆಸೆಂಟ್ ಸ್ಕೌಟ್ಸ್ ಮತ್ತು ಗೈಡ್ಸ್ ರಾಜ್ಯ

ತರಬೇತಿ ಮತ್ತು ಶಿಬಿರ ಕೇಂದ್ರ, ಡೊಡ್ಡಬಳ್ಳಾಪುರ,

ಬೆಂಗಳೂರು ಗ್ರಾಮಾಂತರ ಜಿಲ್ಲೆ



ಪ್ರಕಟಣೆ :

ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್, ಕರ್ನಾಟಕ

ರಾಜ್ಯ ಕೇಂದ್ರ, ಕಾರ್ಯಾಲಯ

ಶಾಂತಿ ಗೃಹ, ನಂ. 39, ಅರಮನೆ ರಸ್ತೆ,

ಬೆಂಗಳೂರು - 560 001.

**'NISARGA'** -*Souvenir* brought out on the occasion of
27th Karnataka State Jamborette of Scouts and Guides held from 17th to 23rd January 2015, at Dr. Annie Besant Scouts and Guides State Training and Camping Centre, Doddaballapur, Bengaluru Rural District, Karnataka.

Publication : 2015.

Published by :
THE BHARAT SCOUTS & GUIDES, KARNATAKA
State Headquarters,
"Shantigruha" No 39,
Palace Road, Bengaluru - 560001



Chairman Souvenir Commitee :
GO.RU. CHANNABASAPPA

Editor :
SIDDAIAH, I.A.S. (Retd.)
State Secretary

Printed At :
VISHRUTI PRINTS
187, Akkipet Main Road,
Bangalore - 560 053.
Phone : 080-26706014



Lord Baden Powell



Olave Lady Baden Powell



Dr. Annie Besant



(1927) Sri Kanteerava Narasimharaja Wodeyar as Chief Scout & Prince Jayachamaraja Wodeyar as Chief Cub

# FORMER STATE CHIEF COMMISSIONERS OF KARNATAKA



**Justice K. Shankarnarayana Rao**
Chief Scout Comissioner (1922-1943)



**Major Y.V.K. Murthy**
Chief Scout Comissioner (1943-1949)



**J. B. Mallaradhya**
State Chief Comissioner (1953-1960)



**Prof. P. Shivashakar**
Chief Scout Comissioner (1949-1953)
State Chief Commissioner (1960-1964)



**Kondajji Basappa**
State Chief Comissioner (1964-1982)



**V.P. Deenadayalu Naidu**
State Chief Comissioner (1983-1993)
National Commissioner (1992-1995)

ಪಿ.ಜಿ.ಆರ್.ಸಿಂಧ್ಯ
ಜ್ಯ ಮುಖ್ಯ ಆಯುಕ್ತರು
ರತ್ ಸ್ಕೌಟ್ಸ್ ಮತ್ತು ಗೈಡ್ಸ್, ಕರ್ನಾಟಕ



ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್, ಕರ್ನಾಟಕ
ರಾಜ್ಯ ಕೇಂದ್ರ ಕಾರ್ಯಾಲಯ
ಶಾಂತಿ ಗೃಹ, ನಂ. 39, ಅರಮನೆ ರಸ್ತೆ
ಬೆಂಗಳೂರು - 560 001.
ದಿನಾಂಕ : 17-01-2015



## ರಾಜ್ಯ ಮುಖ್ಯ ಆಯುಕ್ತರ ನುಡಿ

ಒಂದು ಶತಮಾನಕ್ಕೂ ಹೆಚ್ಚು ಇತಿಹಾಸವಿರುವ ಭಾರತ್ ಸ್ಕೌಟ್ಸ್ ಹಾಗೂ ಗೈಡ್ಸ್ ಸಂಸ್ಥೆಯ 27ನೇ ಜಾಂಬೋರೇಟ್ ಸಮಾವೇಶವನ್ನು ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಡಾ॥ ಆನಿಬೆಸೆಂಟ್ ತರಬೆತಿ ಶಿಬಿರ ಕೇಂದ್ರದಲ್ಲಿ ಯಶಸ್ವಿಗೊಳಿಸಿದ್ದು ಸಂತೋಷ ತಂದಿದೆ. ಅಕ್ಟೋಬರ್ 2ರ ಗಾಂಧೀಜಯಂತಿ ದಿನದಂದು "ಸ್ವಚ್ಛ ಭಾರತ ಅಭಿಯಾನದ" ಮೂಲಕ ಸ್ಕೌಟ್ಸ್ ಹಾಗೂ ಗೈಡ್ಸ್ ಸಂಸ್ಥಯ ಮುಖ್ಯ ಆಯುಕ್ತರಾಗಿ ಕಾರ್ಯ ಆರಂಭಿಸಿದ ನಂತರ ಕೊಂಡಜ್ಜಿ ಬಸಪ್ಪನವರ ಜನ್ಮ ಶತಮಾನೋತ್ಸವ ಆಚರಣೆಯನ್ನು ಬೆಂಗಳೂರು ಕೇಂದ್ರ ಕಛೇರಿಯಲ್ಲಿ ಹಮ್ಮಿಕೊಂಡು ಯಶಸ್ವಿಯಾದೆವು. ಇದೇ ಸಂದರ್ಭದಲ್ಲಿ ನಮ್ಮ ಪದಾಧಿಕಾರಿಗಳೊಂದಿಗೆ 27ನೇ ಜಾಂಬೋರೇಟ್‌ನಲ್ಲಿ ಜನವರಿಯಲ್ಲಿ ಹಮ್ಮಿಕೊಳ್ಳುವ ನಿರ್ಧಾರ ತೆಗೆದುಕೊಂಡೆವು.

ಆರಂಭದಲ್ಲಿ ಆತಂಕಗಳಿದ್ದವು, ಸುಮಾರು ಐದು ಸಾವಿರ ವಿದ್ಯಾರ್ಥಿ ಸಮುದಾಯ ಹಾಗೂ ತರಬೇತಿ ನೀಡುವ ಶಿಕ್ಷಕರನ್ನು ಮುವತ್ತ ಮೂರು ಜಿಲ್ಲೆಗಳಿಂದ ಸಂಘಟಿಸುವ ಜವಾಬ್ದಾರಿಗಳಿದ್ದವು. ಎಲ್ಲಾ ಜಿಲ್ಲೆಗಳಿಂದ ಆಗಮಿಸುವ ವಿದ್ಯಾರ್ಥಿ ಸಮುದಾಯ ಹಾಗೂ ತರಬೇತಿ ಶಿಕ್ಷಕರಿಗೆ ಪ್ರತ್ಯೇಕ ಗುಡಾರಗಳು, ಅಡುಗೆ ಮನೆಗಳು, ಶೌಚಾಲಯ ಇತ್ಯಾದಿ ಮೂಲಭೂತ ಸೌಕರ್ಯ ಸೃಷ್ಟಿಸುವ ಸವಾಲುಗಳಿದ್ದವು. ಕುಡಿಯುವ ನೀರು ಪೂರೈಕೆ, ವಿದ್ಯಾರ್ಥಿ–ವಿದ್ಯಾರ್ಥಿನಿಯರಿಗೆ ಭದ್ರತೆ ಒದಗಿಸುವ ಅವಶ್ಯಕತೆಗಳು ಅತಿಸೂಕ್ಷ್ಮದ್ದಾಗಿತ್ತು.

ಈ ಎಲ್ಲಾ ಸವಾಲುಗಳನ್ನು ನಮ್ಮ ಪದಾಧಿಕಾರಿಗಳು ದಿಟ್ಟವಾಗಿ ನಿಭಾಯಿಸಿದ್ದಾರೆ. ನಮ್ಮ ಕಛೇರಿ ಸಿಬ್ಬಂದಿ ವರ್ಗ ಹಾಗೂ ಜಿಲ್ಲಾವಾರು ಪದಾಧಿಕಾರಿಗಳು ಕೂಡ ಸಕಾಲದಲ್ಲಿ ಸ್ಪಂದಿಸಿ ಜಾಂಬೋರೇಟ್ 15ರ ಸಮಾವೇಶವನ್ನು ಯಶಸ್ವಿಗೊಳಿಸಿದ್ದಾರೆ. ಈ ಜಾಂಬೋರೇಟ್ ಯಶಸ್ಸಿನ ಹಿಂದೆ ಅಸಂಖ್ಯಾತ ಮನಸ್ಸುಗಳ ತುಡಿತ ಹಾಗೂ ಅವಿರತ ಶ್ರಮವಿದೆ.

ಸನ್ಮಾನ್ಯ ಮುಖ್ಯ ಮಂತ್ರಿಗಳು ಈ ಸಮಾವೇಶಕ್ಕೆ ಸರ್ಕಾರದ ಧನ ಸಹಾಯ ನೀಡಿ ಸಹಕರಿಸಿದ್ದಾರೆ. ವಾರ್ತಾ ಮತ್ತು ಸಂಪರ್ಕ ಇಲಾಖೆಯ ಅಧಿಕಾರ ವರ್ಗ ಜಾಂಬೋರೇಟ್ ಕುರಿತಂತೆ ಜಾಹೀರಾತು ನೀಡಿ, ಪ್ರದರ್ಶನ ಫಲಕಗಳನ್ನು ಬೆಂಗಳೂರಿನ ಕೇಂದ್ರ ಸ್ಥಳದಲ್ಲಿ ಹಾಕಿದ್ದರು. ಸುದ್ದಿ ಮಾಧ್ಯಮಗಳಲ್ಲಿ ಪತ್ರಕರ್ತ ಪ್ರತಿನಿಧಿಗಳಿಗೆ ಮಾಹಿತಿ ನೀಡಿ ಪ್ರಚುರಪಡಿಸುವ ಕೆಲಸವನ್ನು ವಾರ್ತಾ ಇಲಾಖೆಯ ಅಧಿಕಾರಿಗಳು ನಿರ್ವಹಿಸಿದ್ದಾರೆ. ಇದೇ ರೀತಿ ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಜಿಲ್ಲಾಡಳಿತ ಲೋಕೋಪಯೋಗಿ ಇಲಾಖೆ ಪೋಲೀಸ್ ಇಲಾಖೆ ಸೇರಿದಂತೆ ಎಲ್ಲಾ ಇಲಾಖಾ ಮುಖ್ಯಸ್ಥರು ನಮ್ಮೊಂದಿಗೆ ಸಹಕರಿಸಿದ್ದಾರೆ. ಇವರೆಲ್ಲರಿಗೂ ತುಂಬು ಹೃದಯದಿಂದ ಕೃತಜ್ಞೆಗಳನ್ನು ಈ ಮೂಲಕ ತಿಳಿಸುತ್ತಿದ್ದೇನೆ. ಈ ಎಲ್ಲಾ ಅಧಿಕಾರಿ ವರ್ಗದವರು ದೂರದ ಊರುಗಳಿಂದ ಬಂದಿದ್ದ ವಿದ್ಯಾರ್ಥಿ ಸಮುದಾಯದ ಉಲ್ಲಾಸಕ್ಕೆ ಕಾರಣರಾಗಿದ್ದಾರೆ ಎಂಬುದು ಅತಿಶೋಯಕ್ತಿ ಅಲ್ಲ!

ಜಾಂಬೋರೇಟ್ ಸಮಾವೇಶ ನನಗಂತೂ ಅವಿಸ್ಮರಣೀಯವಾದ ಅನುಭವ ನೀಡಿದೆ. ಜನವರಿ 17 ರಿಂದ 23ರವರೆಗೆ ದೊಡ್ಡಬಳ್ಳಾಪುರದ ತರಬೇತಿ ಶಿಬಿರ ಕೇಂದ್ರದಲ್ಲಿ ಐದು ಸಾವಿರಕ್ಕೂ ಹೆಚ್ಚು ವಿದ್ಯಾರ್ಥಿ ಸಮುದಾಯ ಹಾಗೂ ತರಬೇತಿ ಶಿಕ್ಷಕರ ನಡುವೆ ಕಳೆದ ಕ್ಷಣಗಳು ಖುಷಿ ನೀಡಿದೆ. ತುಂಬಾ ವರ್ಷಗಳ ನಂತರ ಬೆಂಗಳೂರಿನ ಮನೆ ಹಾಗೂ ಕಛೇರಿ ವಾಸ್ತವ್ಯ ಬದಲಿಸಿ, ತರಬೇತಿ ಶಿಬಿರ ಕೇಂದ್ರದ ವಾಸ್ತವ್ಯ ತೀರಾ ಅಪರೂಪ ಎನಿಸುವಂಥಹದ್ದು. ಅಲ್ಲಿ ಬೆಳಗ್ಗೆ ಮೈ ನಡುಗಿಸುವ ಚಳಿ ಇತ್ತು. ಮಧ್ಯಾಹ್ನದ ಹೊತ್ತಿಗೆ ಸೂರ್ಯ ನೆತ್ತಿಯ ಮೇಲೆ ಸುಡು ಬಿಸಿಲಿನ ತಾಪ ಹೆಚ್ಚಿಸುತ್ತಿದ್ದ. ಆದರೂ ಈ ಎಲ್ಲಾ ಚಳಿ, ಬಿಸಿಲಿನ ನಡುವೆ ವಿದ್ಯಾರ್ಥಿ/ವಿದ್ಯಾರ್ಥಿನಿಯರ ಆಟ, ಸಾಹಸ ಕ್ರೀಡೆ ಜನಪದ ಹಾಡು, ವೈವಿಧ್ಯಮಯವಾಧ ಸಾಂಸ್ಕೃತಿಕ ಕಾರ್ಯಕ್ರಮಗಳು ಜೊತೆಗೆ ಬಗೆ ಬಗೆಯ ಊಟೋಪಚಾರಗಳು ಪ್ರತ್ಯೇಕ ಲೋಕವನ್ನೇ ನಿರ್ಮಿಸಿದಂತಾಗಿತ್ತು. ಅದೊಂದು ಬಹು ದೊಡ್ಡ ಮಕ್ಕಳ ಜಾತ್ರೆ.

ಒಂದು ಸಮಾವೇಶದ ಯಶಸ್ಸು ಅಲ್ಲಿಗೆ ಆಗಮಿಸುವ ಜನಸಮೂಹ ಹಾಗೂ ಆಹ್ವಾನಿತರಾಗಿದ್ದ ಅತಿಥಿಗಳ ಉಪಸ್ಥಿತಿಗಳಿಂದ ನಿರ್ಧರಿಸಬಹುದು. ಹಾಗೆಯೇ ಸಮಾವೇಶದ ಉದ್ದೇಶ ಅರ್ಥಪೂರ್ಣವಾಗಿ ಯಶಸ್ವಿಯಾಯಿತು ಎಂಬುದರಿಂದಲೂ ಅಳೆಯಬಹುದು. ಈ ಹಿನ್ನೆಲೆಯಲ್ಲಿ ಸಮಾವೇಶದ ಉದ್ದೇಶಗಳು ಅರ್ಥಪೂರ್ಣವಾಗಿ ತಲುಪಬೇಕಾದವರಿಗೆ ತಲುಪಿದೆ. ಈ ಸಮಾವೇಶಕ್ಕೆ ಆಹ್ವಾನಿತರಾಗಿದ್ದ ಘನವೆತ್ತ ರಾಜ್ಯಪಾಲರು, ಸನ್ಮಾನ್ಯ ಮುಖ್ಯಮಂತ್ರಿಗಳು ಹಾಗೂ ಅವರ ಸಚಿವ ಸಹೋದ್ಯೋಗಿ ಸಚಿವರು ನೂರಕ್ಕೆ ನೂರರಷ್ಟು ಪ್ರತಿದಿನದ ಕಾರ್ಯಕ್ರಮದಲ್ಲಿ ಹಾಜರಿದ್ದು ಸ್ಕೌಟ್ಸ್ ಹಾಗೂ ಗೈಡ್ಸ್ ಚಳವಳಿಯ ಬೆಂಬಲಕ್ಕೆ ನಿಂತು ಪ್ರೋತ್ಸಾಹಿಸಿದ್ದಾರೆ. ಇದೆಲ್ಲವೂ ನಮ್ಮ ರಾಜ್ಯದಲ್ಲಿರುವ ಮೂರೂವರೆ ಲಕ್ಷ ಸ್ಕೌಟ್ಸ್ ಹಾಗೂ ಗೈಡ್ಸ್ ವಿದ್ಯಾರ್ಥಿ ಸಮುದಾಯವನ್ನು ಮುಂದಿನ ಮೂರು ವರ್ಷದಲ್ಲಿ ಹತ್ತು ಲಕ್ಷಕ್ಕೆ ಏರಿಸುವ ನಮ್ಮ ಗುರಿಗೆ ಸಾರ್ಥಕ ಆರಂಭ ನೀಡಿದೆ ಎಂಬುದು ನನ್ನ ಅನಿಸಿಕೆ. ಜೊತೆಗೆ ಜಾಂಬೋರೇಟ್ ಜಾತ್ರೆಯೂ ಯಶಸ್ವಿಯಾಗಿದೆ.

ಈಗ ಮಾರ್ಚ್, ಏಪ್ರಿಲ್ ತಿಂಗಳ ಪರೀಕ್ಷೆಗೆ ವಿದ್ಯಾರ್ಥಿಗಳು ಪೂರ್ವಸಿದ್ಧತೆ ಮಾಡಿಕೊಳ್ಳುವ ಸಮಯ. ಅಂದರೆ, ನಮ್ಮ ಜಾಂಬೋರೇಟ್ ಸಮಾವೇಶಕ್ಕೆ ಬಂದಿದ್ದ ವಿದ್ಯಾರ್ಥಿಗಳಿಗೂ ಪರೀಕ್ಷೆ ಎದುರಾಗುತ್ತಿದೆ. ಈ ಹಿನ್ನೆಲೆಯಲ್ಲಿ ಶೈಕ್ಷಣಿಕ ಪಾಠ, ಹೋಮ್‌ವರ್ಕ್‌ಗೆ ವಿರಾಮ ಹಾಕಿ, ನಮ್ಮೊಂದಿಗೆ ಏಳುದಿನವಿದ್ದ ವಿದ್ಯಾರ್ಥಿಗಳು ಪ್ರಕೃತಿ ನಡುವೆ ಪಠ್ಯೇತರ ಚಟುವಟಿಗಳಾದ ಆಟ, ಹಾಡು ಕ್ರೀಡಾ ಸ್ಫೂರ್ತಿಯಿಂದ ಬರಲಿರುವ ಪರೀಕ್ಷೆಗಳನ್ನು ಸ್ಪರ್ಧಾತ್ಮಕವಾಗಿ ಪರಿಗಣಿಸಲಿ ಎಂದು ಹಾರೈಸುತ್ತೇನೆ. ಈ ಜಾಂಬೋರೇಟ್ 15ರ ಯಶಸ್ಸಿಗೆ ಹಗಲು ರಾತ್ರಿಯನ್ನದೆ ಶ್ರಮಿಸಿದ ನಮ್ಮ ಪದಾಧಿಕಾರಿ ಸಹೋದ್ಯೋಗಿಗಳಿಗೆ ಸ್ಕೌಟ್ಸ್ ಹಾಗೂ ಗೈಡ್ಸ್‌ನ ತರಬೇತುದಾರ ಶಿಕ್ಷಕರಿಗೆ ಮತ್ತೊಮ್ಮೆ ಕೃತಜ್ಞತೆಗಳನ್ನು ತಿಳಿಸುತ್ತಿದ್ದೇನೆ. ಈಗ ನಮ್ಮೆದುರಿಗೆ ಸ್ಕೌಟ್ಸ್ ಹಾಗೂ ಗೈಡ್ಸ್ ಚಳವಳಿಯ ದೈನಂದಿನ ಕಾರ್ಯ ಚಟುವಟಿಕೆಗಳ ಜೊತೆಗೆ, ಮಾಜಿ ಸಚಿವ ಕೊಂಡಜ್ಜಿ ಬಸಪ್ಪನವರ ಜನ್ಮಶತಮಾನೋತ್ಸವವನ್ನು ಅರ್ಥಪೂರ್ಣವಾಗಿ ಹಮ್ಮಿಕೊಳ್ಳುವ ಉದ್ದೇಶಿತ ಕಾರ್ಯಕ್ರಮಗಳ ಕಡೆಗೆ ಅತ್ಯವಶ್ಯಕವಾದ ಗಮನ ನೀಡಬೇಕಿದೆ.

(ಪಿ.ಜಿ.ಆರ್. ಸಿಂಧ್ಯ)
ರಾಜ್ಯ ಮುಖ್ಯ ಆಯುಕ್ತರು

ಸಿದ್ದಯ್ಯ, ಭಾ.ಆ.ಸೇ.(ನಿ.)
ಜ್ಯ ಕಾರ್ಯದರ್ಶಿ



ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್, ಕರ್ನಾಟಕ
ರಾಜ್ಯ ಕೇಂದ್ರ ಕಾರ್ಯಾಲಯ
ಶಾಂತಿ ಗೃಹ, ನಂ. 39, ಅರಮನೆ ರಸ್ತೆ
ಬೆಂಗಳೂರು - 560 001.
ದಿನಾಂಕ : 17-01-2015



## ರಾಜ್ಯ ಕಾರ್ಯದರ್ಶಿಗಳ ನುಡಿ

ಕನ್ನಡಿಗರ ಹೆಮ್ಮೆಯ ಕವಿ ಪಂಪ ತನ್ನ ಕಾವ್ಯ ಪುರಾಣದಲ್ಲಿ "ಮನುಷ್ಯ ಕುಲಂ ತಾನೊಂದೇ ವಲಂ" ಎಂದು ಸುಮಾರು ಒಂದು ಸಾವಿರ ವರ್ಷಗಳ ಹಿಂದೆಯೇ ಇಡೀ ಜಗತ್ತಿಗೆ ಸಂದೇಶ ನೀಡಿದ್ದಾರೆ. ಇದೇ ರೀತಿ ನಮ್ಮ ರಾಷ್ಟ್ರಕವಿ ಕುವೆಂಪು ಅವರು ವಿಶ್ವ ಮಾನವ ಸಂದೇಶದಲ್ಲಿ "ಏನಾದರೂ ಆಗು ಮೊದಲು ಮಾನವನಾಗು" ಎಂದು ಸಾರ್ವತ್ರಿಕ ಮೌಲ್ಯವನ್ನು ಸ್ಮರಿಸಿದ್ದಾರೆ.

ಇದೆಲ್ಲವೂ ಈಗ ನನ್ನ ಅನುಭವಕ್ಕೆ ಹತ್ತಿರವಾಗುತ್ತಿದೆ. ಡಾ॥ ಅನಿಬೆಸೆಂಟ್ ಸ್ಕೌಟ್ ಹಾಗೂ ಗೈಡ್ಸ್‌ನ ದೊಡ್ಡಬಳ್ಳಾಪುರದ ತರಬೇತಿ ಕೇಂದ್ರದಲ್ಲಿ ಐದು ಸಾವಿರಕ್ಕೂ ಹೆಚ್ಚು ವಿದ್ಯಾರ್ಥಿ/ವಿದ್ಯಾರ್ಥಿನಿಯರ ನಡುವೆ ನಿಂತು ಮನುಷ್ಯನ ಸಾರ್ವತ್ರಿಕ ಮೌಲ್ಯಗಳ ಬಗ್ಗೆ ಚಿಂತಿಸುವಾಗ ಇದೆಲ್ಲವೂ ನನ್ನ ನೆನಪಿಗೆ ಬರುತ್ತಿದೆ. ಕೇವಲ ಕಾಂಪೌಂಡ್ ಗೋಡೆಗಳ ಬಂಧನದಲ್ಲಿ ಹೋಮ್‌ವರ್ಕ್, ಸಮವಸ್ತ್ರಗಳು, ಶಿಕ್ಷಕರ ನಡುವಿನ ಪೆನ್ನು ನೋಟ್ ಬುಕ್‌ಗಳ ಪಂಜರದಲ್ಲಿ ಬಂಧಿಯಾಗಿರುತ್ತಿದ್ದ ಮಕ್ಕಳು ಇಲ್ಲಿ ಹಕ್ಕಿಗಳಂತೆ ಹಾರುತ್ತಿದ್ದಾರೆ. ಚಿಗುರು ಗರಿಕೆಗಳ ನಡುವೆ ಸರ್ವ ಸ್ವತಂತ್ರವಾಗಿ ಜಿಗಿಯುವ ಮೊಲ ಜಿಂಕೆಗಳ ಹಾಗೆ ಈ ವಿದ್ಯಾರ್ಥಿಗಳು ಸಂಭ್ರಮಿಸುತ್ತಿದ್ದಾರೆ.

ಇಲ್ಲಿ ಯಾವುದೇ ಧರ್ಮ, ಜಾತಿ, ಪಂಥಗಳಿಲ್ಲ. ಬಣ್ಣ, ಭಾಷೆಗಳ ಗಡಿ ರೇಖೆಯ ಗೋಡೆಗಳಿಲ್ಲ. ವಿದ್ಯಾರ್ಥಿಗಳು ಆಟವಾಡುತ್ತಾ ಶಿಕ್ಷಣ ಕಲಿಯಬೇಕು. ನೈತಿಕ ಮೌಲ್ಯಗಳನ್ನು ಅಳವಡಿಸಿಕೊಂಡೇ ಸಜ್ಜನ ವ್ಯಕ್ತಿತ್ವ ರೂಢಿಸಿಕೊಂಡು ಬದುಕುವ ವಿಧಾನವನ್ನು ಕಲಿಯಬೇಕು. ಇದು ನಮ್ಮ ಸ್ಕೌಟ್ ಹಾಗೂ ಗೈಡ್‌ನ ಜಾಂಬೋರೇಟ್‌ನ ತರಬೇತಿ ಶಿಬಿರ ಕೇಂದ್ರದಲ್ಲಿರುವ ಮಕ್ಕಳ ಮನ ಮುಟ್ಟಿದೆ. ಕುವೆಂಪು ಆಶಯದಂತೆ ಮೊದಲು ನಮ್ಮ ಮಕ್ಕಳ ಮನುಕುಲದಲ್ಲಿ ಮಾನವರಾಗಿ ಪರಸ್ಪರ ಸಹೋದರ/ಸಹೋದರಿಯರಂತೆ ಬದುಕುವುದನ್ನು ಕಲಿಸುವುದೇ ನಿಜವಾದ ಶಿಕ್ಷಣ. ಮನುಷ್ಯನಾದವನಿಗೆ ಯಾವುದೇ ಜಾತಿ, ಮತ, ಪಂಥಗಳ ಗಡಿ ಇರಬಾರದು ಎಂದು ಸಾರಿದ ಮಹಾ ಕವಿ ಪಂಪನ ಅನಿಸಿಕೆಯಂತೆ, ನಮ್ಮ ಸ್ಕೌಟಿಂಗ್ ಹಾಗೂ ಗೈಡಿಂಗ್‌ನ ಶೈಕ್ಷಣಿಕ ಚಟುವಟಿಕೆಗಳಿವೆ. ಒಂದರ್ಥದಲ್ಲಿ ಸ್ಕೌಟ್ ಹಾಗೂ ಗೈಡ್ ಚಳವಳಿ ನಾಗರಿಕ ಸಮಾಜದಲ್ಲಿ ಅರ್ಥಪೂರ್ಣ ವ್ಯಕ್ತಿತ್ವದತ್ತ ವಿದ್ಯಾರ್ಥಿ ಸಮುದಾಯವನ್ನು ಕೊಂಡೊಯ್ಯುತ್ತದೆ.

* * *

ಕಳೆದ ಮೂರು ತಿಂಗಳ ಹಿಂದೆ ಈ ಚಳವಳಿಯ ರಾಜ್ಯ ಕಾರ್ಯದರ್ಶಿಯಾಗಿ ಹುದ್ದೆ ವಹಿಸಿಕೊಂಡ ಆರಂಭದಲ್ಲೇ ಜಾಂಬೋರೇಟ್–2015ನ್ನು ದೊಡ್ಡಬಳ್ಳಾಪುರ ತರಬೇತಿ ಶಿಬಿರ ಕೇಂದ್ರದಲ್ಲಿ ಯಶಸ್ವಿಯಾಗಿಸುವ ನಿರ್ಧಾರ ತೆಗೆದುಕೊಂಡಿದ್ದೆವು. ಇದಕ್ಕೆ ಬೇಕಾದ ಅಗತ್ಯ ಮೂಲಭೂತ ಸೌಕರ್ಯಗಳನ್ನು ಸೃಷ್ಠಿಸುವ ಅನಿವಾರ್ಯತೆಯೂ ನಮ್ಮ ಎದುರಿಗತ್ತು. ರಾಜ್ಯದ ಮುವತ್ತ ಮೂರು ಜಿಲ್ಲೆಗಳಿಂದ ಬರುವ ವಿದ್ಯಾರ್ಥಿ ಸಮುದಾಯದ ಜೊತೆಗೆ ಅವರ ನೇತೃತ್ವ ವಹಿಸುವ ಶಿಕ್ಷಕರು ಹಾಗೂ ಸ್ಕೌಟ್ ಮತ್ತು ಗೈಡ್‌ನ ತರಬೇತಿ ನೀಡುವ ನಾಯಕರುಗಳ ವಾಸ್ತವ್ಯಕ್ಕೆ, ಊಟೋಪಚಾರಕ್ಕೆ ಕುಡಿಯುವ ನೀರು, ಶೌಚಾಲಯ ನಿರ್ಮಾಣ ಇತ್ಯಾದಿ., ಸೌಕರ್ಯಗಳನ್ನು ತಾತ್ಕಾಲಿಕವಾಗಿ ನಿರ್ಮಿಸಬೇಕಾಗಿತ್ತು. ಜೊತೆಗೆ ಭದ್ರತೆ ಮತ್ತು ಇತರ ಸೌಕರ್ಯಗಳುನ್ನು ಒದಗಿಸಿದ ರಾಜ್ಯ ಸರ್ಕಾರದ ವಿವಿಧ ಇಲಾಖೆಗಳ ಅಧಿಕಾರಿಗಳು ಹಾಗೂ ಸಿಬ್ಬಂದಿ ವರ್ಗದವರನ್ನು ಕೃತಜ್ಞತೆಯಿಂದ ಅಭಿನಂದಿಸಬೇಕು. ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಜಿಲ್ಲಾಡಳಿತ, ಪೊಲೀಸ್ ಇಲಾಖೆಯ ಹಿರಿಯ ಅಧಿಕಾರಿಗಳು, ಬೆಂಗಳೂರು ನೀರು ಸರಬರಾಜು ಮಂಡಳಿ ಸೇರಿದಂತೆ ಎಲ್ಲಾ ಅಧಿಕಾರಿ ವರ್ಗ ಹಾಗೂ ಸಿಬ್ಬಂದಿ ವರ್ಗದವರಿಗೆ ನಾವು ಆಭಾರಿಯಾಗಿದ್ದೇವೆ. ಭದ್ರತೆ ಹಾಗೂ ಕುಡಿಯುವ ನೀರು ಹಾಗು ಸ್ನಾನಗೃಹಗಳನ್ನು ನಿರ್ಮಿಸಲು ಸರ್ಕಾರದ ವಿವಿಧ ಇಲಾಖೆಗಳ ಸಿಬ್ಬಂದಿ ವರ್ಗ ಹಾಗೂ ಸ್ಕೌಟ್ ಹಾಗೂ ರಾಜ್ಯ ಗೈಡ್‌ನ ಪದಾಧಿಕಾರಿಗಳು ಆದ್ಯತೆ ನೀಡಿದ್ದಾರೆ.

ದಿನಾಂಕ 17 ರಿಂದ 23 ಜನವರಿ 2015ರವರೆಗೆ ನಡೆದ ಈ ರಾಜ್ಯ ಜಾಂಬೋರೇಟ್ 2015ರ ಸ್ಕೌಟ್ ಮತ್ತು ಗೈಡ್‌ನ ಜಾತ್ರೆಗೆ ಕರ್ನಾಟಕದ ಘನವೆತ್ತ ರಾಜ್ಯಪಾಲರು ಸೂಕ್ತ ಸಂದೇಶದೊಂದಿಗೆ ಆರಂಭಗೊಂಡಿದೆ. ಸಚಿವರುಗಳಾದ ಸನ್ಮಾನ್ಯ ಶ್ರೀ ಡಿ.ಕೆ. ಶಿವಕುಮಾರ್ ಹಾಗೂ ಶ್ರೀ.ಯು.ಟಿ.ಖಾದರ್ ಅವರು ಸಮಾರಂಭದಲ್ಲಿ ಹಾಜರಿದ್ದು, ಸಭೆಯ ಘನತೆಯನ್ನು ಹೆಚ್ಚಿಸಿದ್ದಾರೆ. ಈ ಸಂಧರ್ಭದಲ್ಲಿ ಈ ಜಾಂಬೋರೇಟ್ ಯಶಸ್ವಿಯಾಗಲು ಕಾರಣರಾದ ಸ್ಕೌಟ್ ಮತ್ತು ಗೈಡ್‌ನ ಎಲ್ಲ ಕಾರ್ಯಕರ್ತರುಗಳು ಸಿಬ್ಬಂದಿ ವರ್ಗದ ಶ್ರಮವನ್ನು ನಾನು ಹೊಗಳುವುದರ ಮೂಲಕ, ನಮ್ಮ ಬೆನ್ನುಗಳನ್ನು ನಾವೇ ತಟ್ಟಿಕೊಳ್ಳುವ ಪುನರಾವರ್ತನೆ ಅಗತ್ಯವಿಲ್ಲ ಎಂದು ಭಾವಿಸಿದ್ದೇನೆ, ಇದು ನಮ್ಮೆಲ್ಲರ ಜವಾಬ್ದಾರಿ ಹಾಗು ಕರ್ತವ್ಯವಾಗಿತ್ತು.

ಜನವರಿ 17ರ ಸಮಾರಂಭದ ಉದ್ಘಾಟನೆಯ ನಂತರ ಜಾಂಬೋರೇಟ್ 2015ರ ವಿಶೇಷ ಸ್ಮರಣ ಸಂಚಿಕೆಗಾಗಿ ಸಂದೇಶವನ್ನು ಆತುರಾತುರಾವಾಗಿ ಬರೆದಿದ್ದೇನೆ. ಮಕ್ಕಳ ಪಠ್ಯೇತರ ಶೈಕ್ಷಣಿಕ ದೊಡ್ಡ ಜಾಂಬೋರೇಟ್‌ನ್ನು ನೋಡಿ ನನಗೆ ಮಹಾಕವಿ ಪಂಪ ಹಾಗೂ ಕುವೆಂಪು ಅವರು ವಿಶ್ವಮಾನವ ಕಲ್ಪನೆಯ ಸಾಕಾರ, ಈ ಜಾಂಬೋರೇಟ್‌ನಲ್ಲಿ ಭಾಗವಹಿಸಿರುವ ಮಕ್ಕಳು ಭವಿಷ್ಯದಲ್ಲಿ ದೇಶದ ಸದೃಢ ಪ್ರಜೆಗಳಾಗುತ್ತಾರೆ ಎಂಬ ಭರವಸೆ ಹೊಂದಿದ್ದೇನೆ.

ಈ ವಿಶೇಷ ಸ್ಮರಣ ಸಂಚಿಕೆಗೆ ಲೇಖನ ಹಾಗೂ ಆರ್ಥಿಕ ಸಂಪನ್ಮೂಲಕ್ಕಾಗಿ ವಿಶೇಷ ಜಾಹೀರಾತು ನೀಡಿದ ವಿವಿಧ ಇಲಾಖೆಗಳ ಮುಖ್ಯಸ್ಥರುಗಳಿಗೆ ಮತ್ತು ಕಾರ್ಪೋರೇಟ್ ಕಂಪನಿಗಳ ಆಡಳಿತಗಾರರಿಗೆ ಧನ್ಯವಾದಗಳನ್ನು ಹೃದಯಪೂರ್ವಕವಾಗಿ ಅರ್ಪಿಸುತ್ತೇನೆ. ಚಳವಳಿಯ ಬೆಳವಣಿಗೆಯಲ್ಲಿ ನಿಮ್ಮ ಸಹಾಯ–ಸಹಕಾರ ಸದಾ ನಮ್ಮೊಂದಿಗಿರಲಿ ಎಂದು ಆಶೀಸುತ್ತೇನೆ.

(ಸಿದ್ದಯ್ಯ)
ರಾಜ್ಯ ಕಾರ್ಯದರ್ಶಿ

ೂ.ರು. ಚನ್ನಬಸಪ್ಪ
ಅಧ್ಯಕ್ಷರು, ಪ್ರಕಟಣಾ ಸಮಿತಿ
' ಸ್ಕೌಟ್ಸ್ ಮತ್ತು ಗೈಡ್ಸ್, ಕರ್ನಾಟಕ



ಬೆಂಗಳೂರು
15-1-2015



## -: ಅಧ್ಯಕ್ಷರ ನುಡಿ :-

ಬೇರಾವ ಉತ್ಸವ ಅಥವಾ ಸಮಾವೇಶಗಳಿಗೂ ಇಲ್ಲದ ಹೆಸರು ಸ್ಕೌಟ್ ಮತ್ತು ಗೈಡ್ ಸಮಾವೇಶಕ್ಕಿದೆ. ಅದು ಜಾಂಬೊರೇಟ್. ಕನ್ನಡದಲ್ಲಿ "ಜಾಂಬೂರಿ" ಎಂದೇ ಕರೆಯಲಾಗಿದೆ. ಲೋಕಕ್ಕೆ ಬೇಕಾದ ಸತ್ಪ್ರಜೆಗಳನ್ನು ಸಜ್ಜು ಗೊಳಿಸುವ ಘನ ಉದ್ದೇಶದಿಂದ ಲಾರ್ಡ್ ಬೇಡನ್ ಪೊವೆಲ್ ದಂಪತಿಗಳು ಹುಟ್ಟು ಹಾಕಿದ ಸ್ಕೌಟ್ ಮತ್ತು ಗೈಡ್ ಚಳವಳಿ ಇಂದು ಇಡೀ ಜಗತ್ತಿನಾದ್ಯಂತ ಸೇವೆ ಸಲ್ಲಿಸುತ್ತಿರುವ ಅತ್ಯಂತ ಬೃಹತ್ ಪ್ರಮಾಣದ ಸ್ವಯಂ ಸೇವಾ ಸಂಸ್ಥೆಯಾಗಿ ಬೆಳೆದು ನಿಂತಿದೆ.

ಪ್ರಧಾನವಾಗಿ ಮಕ್ಕಳು ಮತ್ತು ಯುವ ಪೀಳಿಗೆಯಲ್ಲಿ ದೈವಶ್ರದ್ಧೆ, ಜೀವನ ಶಿಸ್ತು, ಸ್ನೇಹ, ಸಹಬಾಳ್ವೆ, ರಾಷ್ಟ್ರಪ್ರಜ್ಞೆ ಮತ್ತು ವಿಶಭ್ರಾತೃತ್ವದ ಗುಣಗಳನ್ನು ಬೆಳೆಸುವ ಉನ್ನತ ೕಯೋದ್ದೇಶವನ್ನಿಟ್ಟುಕೊಂಡಿರುವ ಈ ಚಳವಳಿ ಕರ್ನಾಟಕಕ್ಕೆ ಕಾಲಿಟ್ಟು ನೂರು ವರ್ಷಗಳೇ ಸಂದಿವೆ. ರಾಷ್ಟ್ರ ಮತ್ತು ರಾಜ್ಯ ಮಟ್ಟದ ಮಾರ್ಗದರ್ಶನದೊಂದಿಗೆ ಕ್ಷೇತ್ರ ಘಟಕಗಳು ಡೆಸುವ ಚಟುವಟಿಕೆಗಳ ಒಂದು ಸಂಯೋಜಿತ ಮತ್ತು ಪ್ರತಿಷ್ಠಿತ ಉತ್ಸವವೇ ರಾಜ್ಯ ಜಾಂಬೊರೇಟ್. ಇದುವರೆಗೆ ಕರ್ನಾಟಕ ರಾಜ್ಯದಲ್ಲಿ ಅಂತಹ ಇಪ್ಪತ್ತಾರು ಜಾಂಬೊರೇಟ್‌ಗಳು ಡೆದಿದ್ದು. ಇದೀಗ ದೊಡ್ಡಬಳ್ಳಾಪುರದ ಬಳಿ ಇರುವ ಡಾ॥ ಅನಿಬೆಸೆಂಟ್ ಸ್ಕೌಟ್ – ಗೈಡ್ ರಾಜ್ಯ ತರಬೇತಿ ಶಿಬಿರ ಕೇಂದ್ರದ ಅಂಗಳದಲ್ಲಿ ಇಪ್ಪತ್ತೇಳನೆಯ ಜಾಂಬೊರೇಟ್ ಡೆಯುತ್ತಿದೆ.

ಈ ಸಂಯೋಜಿತ ಸಡಗರ-ಸಂಭ್ರಮಗಳ ಸಾಂಸ್ಕೃತಿಕ ಸಮಾವೇಶದ ನೆನಹು ಈ ಸ್ಮರಣ ಸಂಚಿಕೆ. ಈ ಸಂಚಿಕೆಗೆ " ನಿಸರ್ಗ " ಎಂದು ಹೆಸರಿಡಲಾಗಿದೆ. ಇದಕ್ಕೆ ಕಾರಣ ುತ್ತು ಪ್ರೇರಣೆ ಸ್ಕೌಟ್ – ಗೈಡ್ ಚಳವಳಿಯ ಈ ವರ್ಷದ ಧ್ಯೇಯವಾಕ್ಯ "ನೆಲ-ಜಲ-ಪರಿಸರ ಸಂರಕ್ಷಣೆ" ಸಂಚಿಕೆಯ ರಕ್ಷಾ ಕವಚವೇ ಆ ಸಂದೇಶವನ್ನು ಸಾರುತ್ತದೆ.

ಜಾಂಬೊರೇಟ್ ನಂತಹ ಮಹತ್ವದ ಸಂದರ್ಭಗಳಲ್ಲಿ ಸ್ಮರಣ ಸಂಚಿಕೆಗಳನ್ನು ಹೊರತರುವುದು ಸಾಮಾನ್ಯವೆಂದರೂ, ಇಂತಹ ಸಂಚಿಕೆಗಳು ನಿಜವಾದ-ಅರ್ಥದಲ್ಲಿ ುಪಯುಕ್ತ ದಾಖಲೆಗಳಾಗುವುದಂತೂ ನಿಜ. ಪ್ರಸ್ತುತ "ನಿಸರ್ಗ" ದಲ್ಲಿ ಸ್ಕೌಟ್ – ಗೈಡ್ ಚಳವಳಿಯಲ್ಲಿ ಸುದೀರ್ಘ ಅನುಭವ ಪಡೆದಿರುವ ಅನೇಕರ ವಿಚಾರ ಪೂರ್ಣ ೕಖನಗಳಿವೆ. ಚಳವಳಿಯನ್ನು ಕುರಿತ ಒಟ್ಟಾರೆ ಆಲೋಚನೆಗಳಿವೆ. ವ್ಯಕ್ತಿ ವಿಕಸನ, ಪೌರತ್ವ, ಸಾಮಾಜಿಕ ಸಂಬಂಧ, ತರಬೇತಿ, ಯುವಜನಾಂಗ- ಇತ್ಯಾದಿ ವಿಷಯಗಳಿಗೆ ಂಬಂಧಿಸಿದ ವೈವಿಧ್ಯ ಪೂರ್ಣ ಬರಹಗಳಿವೆ. ದಾಖಲೆಯ ದೃಷ್ಟಿಯಿಂದ ಗಮನಾರ್ಹವಾದ ಇಲ್ಲಿರುವ ಒಂದು ಲೇಖನ ವೆಂದರೆ, ರಾಜ್ಯ ಸ್ಕೌಟ್ – ಗೈಡ್ ಸಂಸ್ಥೆಯ ಪ್ರಕಟಣಾ ಭಾಗದ ಹಿಂದಿನ ಸೈನಿಕ ಆಯುಕ್ತರಾದ ಶ್ರೀ ರಾ.ಚಂದ್ರಶೇಖರನ್ ಅವರು ರಾಜ್ಯದಲ್ಲಿ ಇದುವರೆಗೆ ನಡೆದಿರುವ ಜಾಂಬೊರೇಟ್‌ಗಳಿಗೆ ಸಂಬಂಧಿಸಿದಂತೆ ಬರೆದಿರುವ ಲೇಖನ ದರಲ್ಲಿ ಜಾಂಬೊರೇಟ್‌ಗಳು ನಡೆದ ಸ್ಥಳ, ಅವಧಿ ಮತ್ತು ಪಾಲುಗೊಂಡವರ ಸಂಖ್ಯೆಯ ಮಾಹಿತಿಯನ್ನೆಲ್ಲ ಕೊಟ್ಟಿದ್ದಾರೆ.

ಉಳಿದಂತೆ ಇಂಗ್ಲಿಷ್ ಮತ್ತು ಕನ್ನಡ ಭಾಷೆಗಳಲ್ಲಿರುವ ಲೇಖನಗಳು ಈ ಚಳವಳಿಯ ವಾಹಿನಿಯಲ್ಲಿರುವವರಿಗೆ ಮಾತ್ರವಲ್ಲ. ಚಳವಳಿಯಲ್ಲಿ ಆಸಕ್ತಿ ಹೊಂದಿರುವ ತರರಿಗೂ ಉಪಯುಕ್ತ ಮಾಹಿತಿ ಒದಗಿಸುತ್ತವೆ. ಇಲ್ಲಿನ ಎಲ್ಲ ಲೇಖಕರಿಗೂ, ಸಂಪಾದಕ ಮಂಡಳಿಯ ಎಲ್ಲ ಸದಸ್ಯರಿಗೂ ರಾಜ್ಯ ಸ್ಕೌಟ್ – ಗೈಡ್ ಸಂಸ್ಥೆಯ ಪ್ರಕಟಣಾ ವಿಭಾಗದ ತಿಯಿಂದ ಕೃತಜ್ಞತೆ ಸಲ್ಲಿಸುತ್ತೇನೆ.

ನಾನು ಮಾಧ್ಯಮಿಕ ಶಾಲೆಯ ವಿದ್ಯಾರ್ಥಿಯಾಗಿದ್ದಾಗ ಸ್ಕೌಟ್ ಆಗಿದ್ದವನು. ಆ ನಂತರ ನಾನು ಮುಖ್ಯ ವಾಹಿನಿಯಲ್ಲಿರಲು ಸಾಧ್ಯವಾಗಲಿಲ್ಲವಾದರೂ ಈ ಚಳವಳಿಯ ಾಜ್ಯ ಸಂಸ್ಥೆಯ ಮುಖ್ಯ ಆಯುಕ್ತರಾಗಿ ಸೇವೆ ಸಲ್ಲಿಸಿದ ಪ್ರೋ ಪಿ. ಶಿವಶಂಕರ್, ಶ್ರೀ ಜೆ.ಬಿ. ಮಲ್ಲಾರಾಧ್ಯ, ಶ್ರೀ ಕೊಂಡಜ್ಜಿ ಬಸಪ್ಪ, ಶ್ರೀ ಪಿ.ಪಿ. ದೀನದಯಾಳು ನಾಯ್ಡು- ಇವೆರೆಲ್ಲರ ವಧಿಯಲ್ಲೂ ನಾನು ಸಂಸ್ಥೆಯೊಡನೆ ಪರೋಕ್ಷ ಸಂಬಂಧ ಇಟ್ಟುಕೊಂಡಿದ್ದವನು. ಆ ಸಂಬಂಧ ಈ ಹಿಂದಿನ ರಾಜ್ಯ ಮುಖ್ಯ ಆಯುಕ್ತರಾಗಿದ್ದ ಶ್ರೀ ಕೊಂಡಜ್ಜಿ ಬ. ಷಣ್ಮುಖಪ್ಪ ವರ ಕಾಲದಲ್ಲಿ ಪ್ರತ್ಯಕ್ಷ ಸಂಬಂಧವೇ ಆಯಿತೆನ್ನ ಬಹುದು.

ಪ್ರಸ್ತುತ ಮುಖ್ಯ ಆಯುಕ್ತರಾದ ಶ್ರೀ. ಪಿ. ಜಿ. ಆರ್. ಸಿಂಧ್ಯ ಅವರು ಮತ್ತು ರಾಜ್ಯ ಕಾರ್ಯದರ್ಶಿಗಳಾಗಿರುವ ಶ್ರೀ ಸಿದ್ಧಯ್ಯ ಅವರು ಈ ಚಳವಳಿಯಲ್ಲಿ ವಹಿಸಿರುವ ಆಸಕ್ತಿ ುತ್ತು ತಮ್ಮನ್ನು ಅರ್ಪಿಸಿಕೊಂಡಿರುವ ರೀತಿ ನಿಜಕ್ಕೂ ಹೃದಯ ತುಂಬುವಂತಹದ್ದು. ಶ್ರೀ ಸಿಂಧ್ಯ ಅವರ ಅಪೇಕ್ಷೆಯನ್ನು ಉಪೇಕ್ಷಿಸಲಾರದೆ ಈ ಸ್ಮರಣ ಸಂಚಿಕೆ ಸಮಿತಿಯ ಧ್ಯಕ್ಷನಾಗಿರಲು ನಾನು ಒಪ್ಪಿಕೊಂಡಿದ್ದೆನಾದರೂ ವೃದ್ಧಾಪ್ಯದ ಕಾರಣ ನಾನು ಸಲ್ಲಿಸಬೇಕಾದಷ್ಟು ಸೇವೆ ಸಲ್ಲಿಸಲು ಸಾಧ್ಯವಾಗಿಲ್ಲವೆಂದೇ ತಿಳಿದಿದ್ದೇನೆ. ಆದರೂ ರಾಜ್ಯ ಸಂಸ್ಥೆಯ ಸ್ಥಾನಿಕ ಆಯುಕ್ತರಾದ ಶ್ರೀ ಎನ್. ಶ್ರೀನಿವಾಸನ್ ಹಾಗೂ ಶ್ರೀಮತಿ ಕಮಲಾಕ್ಷಿ ಹೆಗಡೆ ಅವರು ಈ ಸಂಚಿಕೆಯನ್ನು ಸಕಾಲದಲ್ಲಿ ಹೊರತರಲು ಪಟ್ಟಿರುವ ಶ್ರಮಾಸಕ್ತಿಗಳನ್ನು ನಾನು ಮರೆಸದಿರಲಾರೆ. ಹಾಗೆಯೇ ಸ್ಮರಣ ಸಂಚಿಕೆ ಈ ರೂಪ ತಾಳಲು ನೆರವಾಗಿರುವ ರಾಜ್ಯ ಸಂಸ್ಥೆಯ ಸಹಕಾರ್ಯದರ್ಶಿ ಶ್ರೀ ಎಂ.ಎ. ಚೆಲ್ಲಯ್ಯ ಮತ್ತಿತರ ಸ್ಕೌಟ್ – ಗೈಡ್ ಂಧುಗಳನ್ನು ನೆನೆಯುತ್ತೇನೆ.

ಸಂಚಿಕೆಗೆ ಅರ್ಥಪೂರ್ಣ ಮುಖಪುಟ ವಿನ್ಯಾಸ ರಚಿಸಿಕೊಟ್ಟಿರುವ ಕಲಾವಿದ ಶ್ರೀ ಪುಂಡಲೀಕ ಕಲ್ಲಿಗನೂರ ಅವರಿಗೂ, ಅಚ್ಚುಕಟ್ಟಾಗಿ, ಮುದ್ರಿಸಿಕೊಟ್ಟ ವಿಶ್ರುತಿ ಪ್ರಿಂಟ್ಸ್ ಮುದ್ರಣದವರಿಗೂ, ಜಾಹಿರಾತುಗಳ ಪ್ರಾಯೋಜಕರಿಗೂ ವಂದನೆಗಳು.

(ಗೊ.ರು. ಚನ್ನಬಸಪ್ಪ)
ಅಧ್ಯಕ್ಷರು, ಪ್ರಕಟಣಾ ಸಮಿತಿ



# ಶ್ರೀ ಎಂ.ಹಮೀದ್ ಅನ್ಸಾರಿ

ಭಾರತದ ಘನತೆವೆತ್ತ ಉಪ-ರಾಷ್ಟ್ರಪತಿಗಳು



## ಶ್ರೀ ನರೇಂದ್ರ ಮೋದಿ

ಸನ್ಮಾನ್ಯ ಪ್ರಧಾನ ಮಂತ್ರಿಗಳು, ಭಾರತ ಸರ್ಕಾರ



## ಶ್ರೀ ವಾಜುಬಾಯಿ ರೂಡಾಬಾಯಿ ವಾಲಾ

ಕರ್ನಾಟಕದ ಘನತೆವೆತ್ತ ರಾಜ್ಯಪಾಲರು

ಪೋಷಕರು, ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್, ಕರ್ನಾಟಕ



# ಶ್ರೀ ಸಿದ್ದರಾಮಯ್ಯ

ಸನ್ಮಾನ್ಯ ಮುಖ್ಯ ಮಂತ್ರಿಗಳು, ಕರ್ನಾಟಕ

ಅಧ್ಯಕ್ಷರು, ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್, ಕರ್ನಾಟಕ



# ಶ್ರೀ ಕಾಗೋಡು ತಿಮ್ಮಪ್ಪ

ಸನ್ಮಾನ್ಯ ವಿಧಾನ ಸಭಾಧ್ಯಕ್ಷರು

ಕರ್ನಾಟಕ ವಿಧಾನಸಭೆ



**ಶ್ರೀ ಡಿ.ವಿ.ಸದಾನಂದಗೌಡ**
ಸನ್ಮಾನ್ಯ ಕಾನೂನು ಮತ್ತು ನ್ಯಾಯಾಂಗ ಇಲಾಖೆಯ ಸಚಿವರು
ಭಾರತ ಸರ್ಕಾರ, ನವದೆಹಲಿ



**ಶ್ರೀ ಎಂ.ವೀರಪ್ಪಮೊಯ್ಲಿ**
ಮಾನ್ಯ ಲೋಕಸಭಾ ಸದಸ್ಯರು, ಚಿಕ್ಕಬಳ್ಳಾಪುರ ಕ್ಷೇತ್ರ
ಮಾಜಿ ಕೇಂದ್ರ ಸರ್ಕಾರದ ಸಚಿವರು



**ಶ್ರೀ ಆರ್.ವಿ.ದೇಶಪಾಂಡೆ**
ಮಾನ್ಯ ಉನ್ನತ ಶಿಕ್ಷಣ ಮತ್ತು ಪ್ರವಾಸೋದ್ಯಮ ಸಚಿವರು
ಉಪಾಧ್ಯಕ್ಷರು, ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್, ಕರ್ನಾಟಕ



**ಶ್ರೀ ಕಿಮ್ಮನೆ ರತ್ನಾಕರ್**
ಮಾನ್ಯ ಪ್ರಾಥಮಿಕ ಮತ್ತು ಪ್ರೌಢಶಿಕ್ಷಣ ರಾಜ್ಯ ಸಚಿವರು
ಉಪಾಧ್ಯಕ್ಷರು, ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್, ಕರ್ನಾಟಕ



**ಶ್ರೀ ಕೆ.ಜೆ.ಜಾರ್ಜ್**

ಮಾನ್ಯ ಗೃಹ ಇಲಾಖೆ ಸಚಿವರು



**ಶ್ರೀ ಡಿ.ಕೆ.ಶಿವಕುಮಾರ್**

ಮಾನ್ಯ ಇಂಧನ ಇಲಾಖೆ ಸಚಿವರು



**ಶ್ರೀ ಆರ್.ರೋಷನ್ ಬೇಗ್**

ಮಾನ್ಯ ವಾರ್ತಾ, ಮೂಲಭೂತ ಸೌಕರ್ಯಗಳು ಮತ್ತು ಹಜ್ ಸಚಿವರು



**ಶ್ರೀ ಹೆಚ್.ಸಿ.ಮಹದೇವಪ್ಪ**

ಮಾನ್ಯ ಲೋಕೋಪಯೋಗಿ ಇಲಾಖೆ ಸಚಿವರು



**ಶ್ರೀ ಆರ್.ಎಲ್.ಜಾಲಪ್ಪ**
ಮಾನ್ಯ ಕೇಂದ್ರ ಸರ್ಕಾರದ ಜವಳಿ ಇಲಾಖೆಯ ಮಾಜಿ ಸಚಿವರು



**ಶ್ರೀ ರಾಮಲಿಂಗಾರೆಡ್ಡಿ**
ಮಾನ್ಯ ಸಾರಿಗೆ ಇಲಾಖೆ ಸಚಿವರು



**ಶ್ರೀ ಯು.ಟಿ.ಖಾದರ್**
ಮಾನ್ಯ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ ಸಚಿವರು



**ಶ್ರೀ ಕೃಷ್ಣ ಬೈರೇಗೌಡ**
ಮಾನ್ಯ ಕೃಷಿ ಇಲಾಖೆ ರಾಜ್ಯ ಸಚಿವರು



**ಶ್ರೀ ಬಿ.ಐ.ನಾಗರಾಲೆ, ಭಾ.ಆ.ಸೇ.(ನಿ.)**
ಮುಖ್ಯ ರಾಷ್ಟ್ರೀಯ ಆಯುಕ್ತರು
ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್, ನವದೆಹಲಿ



**ಶ್ರೀ ಪಿ.ಜಿ.ಆರ್.ಸಿಂಧ್ಯ**
ರಾಜ್ಯ ಮುಖ್ಯ ಆಯುಕ್ತರು
ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್, ಕರ್ನಾಟಕ



**ಶ್ರೀ ಕೊಂಡಜ್ಜಿ ಬ. ಷಣ್ಮುಖಪ್ಪ**
ಉಪಾಧ್ಯಕ್ಷರು



**ಶ್ರೀ ಟಿ.ಎಸ್.ಲೂಕಾಸ್**
ಉಪಾಧ್ಯಕ್ಷರು



**ಶ್ರೀಮತಿ ಸರೋಜ ವಿ. ನಾಯ್ಡು**
ಉಪಾಧ್ಯಕ್ಷರು



**ಶ್ರೀಮತಿ ಶಾಂತ ವಿ.ಆಚಾರ್ಯ**
ಉಪಾಧ್ಯಕ್ಷರು



**ಶ್ರೀ ಸಿದ್ದಯ್ಯ,** ಭಾ.ಆ.ಸೇ.(ನಿ.)
ರಾಜ್ಯ ಕಾರ್ಯದರ್ಶಿ



**ಶ್ರೀ ಪ್ರಭುದೇವ ಜೆ. ಚಿಗಟೇರಿ**
ರಾಜ್ಯ ಕೋಶಾಧಿಕಾರಿ



**ಶ್ರೀ ಎಂ.ಎ.ಖಾಲಿದ್,** ಕ.ಆ.ಸೇ. (ನಿ.)
ರಾಜ್ಯ ಆಯುಕ್ತರು (ಸ್ಕೌಟ್ಸ್)



**ಶ್ರೀಮತಿ ಗೀತಾ ನಟರಾಜ್**
ರಾಜ್ಯ ಆಯುಕ್ತರು (ಗೈಡ್ಸ್)



**ಶ್ರೀ ಚಿನ್ನಸ್ವಾಮಿ ರೆಡ್ಡಿ**
ಜಂಟಿ ರಾಜ್ಯ ಕಾರ್ಯದರ್ಶಿ(ಸ್ಕೌಟ್ಸ್)
ಹಾಗೂ ಜಾಂಬೋರೇಟ್ ಸಂಯೋಜಕರು



**ಶ್ರೀಮತಿ ಎ.ಸ್.ಕೆ. ಪ್ರಭ**
ರಾಜ್ಯ ಜಂಟಿ ಕಾರ್ಯದರ್ಶಿ(ಗೈಡ್ಸ್)



**ಶ್ರೀ ಮೋಹನ್‌ಕುಮಾರ್ ಕೊಂಡಜ್ಜಿ**
ಸ್ಥಾನಿಕ ಆಯುಕ್ತರು (ಕಾರ್ಯಯೋಜನೆಗಳು)
ಸದಸ್ಯರು, ಉಪಸಮಿತಿ ಸ್ಮರಣ ಸಂಚಿಕೆ



**ಶ್ರೀ ಎನ್. ಶ್ರೀನಿವಾಸನ್.**
ಸ್ಥಾನಿಕ ಆಯುಕ್ತರು (ತರಬೇತಿ)
ಹಾಗೂ ಸಂಚಾಲಕರು, ಸ್ಮರಣಸಂಚಿಕೆ



**ಶ್ರೀಮತಿ ಜಾನಕಿ ವೇಣುಗೋಪಾಲ್**
ಸ್ಥಾನಿಕ ಆಯುಕ್ತರು (ಕಾರ್ಯಕ್ರಮಗಳು)
ಹಾಗೂ ಜಾಂಬೋರೇಟ್ ಸಂಯೋಜಕರು,



**ಶ್ರೀಮತಿ ಕಮಲಾಕ್ಷಿ ಹೆಗಡೆ.**
ಸಂಚಾಲಕರು, ಸ್ಮರಣಸಂಚಿಕೆ



**ಶ್ರೀಮತಿ ಬಿ.ವಿ. ರಾಮಲತಾ**
ಸಹಾಯಕ ರಾಜ್ಯ ಆಯುಕ್ತರು
ಉಪಸಮಿತಿ ಸ್ಮರಣ ಸಂಚಿಕೆ
ಬೆಂಗಳೂರು ವಿಭಾಗ



**ಶ್ರೀ ಬಿ.ಎಸ್. ಅನಿಲ್ ಕುಮಾರ್**
ಸದಸ್ಯರು, ಉಪಸಮಿತಿ
ಸ್ಮರಣ ಸಂಚಿಕೆ



**ಶ್ರೀ ಸಂಜಯ್ ದೊರೆ**
ಸದಸ್ಯರು, ಉಪಸಮಿತಿ
ಸ್ಮರಣ ಸಂಚಿಕೆ



**ಶ್ರೀ ಟಿ.ಎ. ಮಂಜುನಾಥಾಚಾರ್**
ರಾಜ್ಯ ಸಂಘಟನಾ ಆಯುಕ್ತರು (ಸ್ಕೌಟ್ಸ್)



**ಶ್ರೀ ಎಲ್.ಟಿ. ಲೋಕೇಶ್**
ರಾಜ್ಯ ತರಬೇತಿ ಆಯುಕ್ತರು (ಸ್ಕೌಟ್ಸ್)



**ಶ್ರೀಮತಿ ಸಿ. ಮಂಜುಳ**
ರಾಜ್ಯ ಸಂಘಟನಾ ಆಯುಕ್ತರು (ಗೈಡ್ಸ್)



**ಶ್ರೀಮತಿ ಕೆ.ವಿ. ಶಾಮಲ**
ರಾಜ್ಯ ತರಬೇತಿ ಆಯುಕ್ತರು (ಗೈಡ್ಸ್)

राजामणि
के प्रेस सचिव
u Rajamony
Secretary to the President




राष्ट्रपति सचिवालय,
राष्ट्रपति भवन,
नई दिल्ली - 110004
President's Secretariat,
Rashtrapati Bhavan,
New Delhi - 110004



## Message

The President of India, Shri Pranab Mukherjee, is happy to know that the 27th Karnataka State Scouts and Guides Jamborette is being held from January 17-23, 2015 at Bengaluru.

The President extends his warm greetings and felicitations to the organisers and the participants and sends his best wishes for the success of the event.

R. V

Press Secretary to the President

VAJUBHAI VA[cut off]
Governor of Karnat[cut off]

No.GS 4 MSG 2015




6th January 2[cut off]



## Message

I am happy to learn that **"THE BHARAT SCOUTS & GUIDES, KARNATAKA,** is organizing " **27th KARNATAKA STATE SCOUTS AND GUIDES JAMBORETTE :,** a huge gathering of Scouts and Guides (Students & Members of the International Movement) from all over the State and Neighbouring State, during January 2015 at Dr.Annie Besant Scouts and Guides State Training and Camping Centre, Doddaballapur, Bengaluru Rural District, to provide an opportunity to exhibit and exchange their cultural & adventurous skills, develop National Integrity, Brotherhood/ Sisterhood, Social Service and Patriotism and that an Educative & Informative **Souvenir** is also being released during the Jamborette.

I send my felicitations and best wishes to the Organisers and all the Scouts and Guides participating in the Jamborette and also for a grand success of the event.

**(VAJUBHAI VALA)**

ರಾಮಯ್ಯ,
ಖ್ಯ ಮಂತ್ರಿ
ಮಂ./ಪ.ಶಾ/24/15




ವಿಧಾನ ಸೌಧ
ಬೆಂಗಳೂರು-560 001
ದಿನಾಂಕ : 09-01-2015



# -: ಸಂದೇಶ :-

ಬೆಂಗಳೂರು ಗ್ರಾಮಾಂತರ ಜಿಲ್ಲೆಯ ದೊಡ್ಡಬಳ್ಳಾಪುರದ ಡಾ॥ ಅನಿಬೆಸೆಂಟ್ ಸ್ಕೌಟ್ಸ್ ಮತ್ತು ಗೈಡ್ಸ್ ರಾಜ್ಯ ತರಬೇತಿ ಹಾಗೂ ಶಿಬಿರ ಕೇಂದ್ರದ ಆವರಣದಲ್ಲಿ ಜನವರಿ 17 ರಿಂದ 23 ರವರೆಗೆ 27ನೇ ಸ್ಕೌಟ್ಸ್ ಮತ್ತು ಗೈಡ್ಸ್ ಜಾಂಬೋರೇಟ್ ಆಯೋಜಿಸಿರುವ ಸುಸಂದರ್ಭದಲ್ಲಿ ಸ್ಮರಣ ಸಂಚಿಕೆಯನ್ನು ಹೊರತರುತ್ತಿರುವುದು ಅತ್ಯಂತ ಸಂತಸದ ಸಂಗತಿಯಾಗಿದೆ.

ಒಂದು ವಾರಗಳ ಕಾಲ ನಡೆಯುವ ಈ ಜಾಂಬೋರೇಟ್‌ನಲ್ಲಿ ರಾಜ್ಯದ ಎಲ್ಲಾ ಜಿಲ್ಲೆಗಳಿಂದ ಮಾತ್ರವಲ್ಲದೆ, ನೆರೆ ರಾಜ್ಯಗಳಿಂದಲೂ 4,500 ಕ್ಕೂ ಹೆಚ್ಚು ಸ್ಕೌಟ್ಸ್, ಗೈಡ್ಸ್, ರೋವರ್ಸ್ ಮತ್ತು ರೇಂಜರ್ಸ್‌ಗಳು ಪಾಲ್ಗೊಳ್ಳುತ್ತಾರೆ ಎಂಬುದು ಹರ್ಷದಾಯಕ ವಿಷಯವಾಗಿದೆ.

ವಿದ್ಯಾರ್ಥಿಗಳಲ್ಲಿ ಶಿಸ್ತು ಮತ್ತು ಸಂಯಮ ರೂಢಿಸಿಕೊಳ್ಳಲು, ಚಿಂತನ ಮತ್ತು ಮಂಥನ ನಡೆಸಲು, ಸೋದರತೆ ಮತ್ತು ಸೌಹಾರ್ದತೆ ವೃದ್ಧಿಸಿಕೊಳ್ಳಲು ಹಾಗೂ ವಿಚಾರ ವಿನಿಮಯಗಳಲ್ಲಿ ತೊಡಗಿಸಿಕೊಳ್ಳಲು ಜಾಂಬೋರೇಟ್ ಅತ್ಯುತ್ತಮ ವೇದಿಕೆಯಾಗಿದೆ.

27ನೇ ಕರ್ನಾಟಕ ಸ್ಕೌಟ್ಸ್ ಮತ್ತು ಗೈಡ್ಸ್ ಜಾಂಬೋರೇಟ್ ಅತ್ಯಂತ ಯಶಸ್ವಿಯಾಗಲಿ ಎಂದು ಹಾರೈಸುತ್ತೇನೆ.

ಶ್ರೀ ಪಿ.ಜಿ.ಆರ್.ಸಿಂಧ್ಯ,
ರಾಜ್ಯ ಮುಖ್ಯ ಆಯುಕ್ತರು,
ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್, ಕರ್ನಾಟಕ

(ಸಿದ್ದರಾಮಯ್ಯ)

**D. H. Waghela**
The Chief Justice

HIGH COURT OF KARNATAKA

" Shanthi Gruh
1, Palace Ro
Bangalore - 560 0



## Message

The Scouts and Guides movement is now deeply and widely rooted in the rich soil of Karnataka, for more than eight decades of achievements and membership of 2.20 lakh uniformed voluntary youth. It is a matter of pride for the State and for the movement which had its first scout troop in Bengaluru in 1909, immediately after commencement of the movement in 1907 in England.

Self reliance, adhering to humane values, adventures, sports and service to others are the hallmarks of this movement. It is indeed heartening that the new generation of young people across the racial or religious divides and national boundaries would unite on a common platform to rise above material world to develop the society with respect for dignity of others and the integrity of natural world; inculcating spirit of fraternity with the aim of universal welfare.

The Scouts and Guides movement has proved its strength and utility with increasing activities and participation of young and inspiring guidance of veterans in many fields. It is a promising fellowship of the young generation.

I wish the 27th Karnataka State Scouts and Guides Jamborette full success in its programmes and all the activities that the scouts and their leaders will enjoy with the camaraderie and cohesion of a family.

**30-12-14**

**(D.H. Waghela)**
Chief Justice



# JAWAHARLAL NEHRU CENTRE FOR ADVANCED SCIENTIFIC RESEARCH

(A Deemed University)

**ofessor C.N.R. Rao, F.R.S**
onal Research Professor
onorary President

**Jakkur Campus, Jakkur P.O**
**Bangalore - 560 064, INDIA**



## Message

I am happy to know that the 27th Karnataka State Scouts & Guides Jamborette - 2015 will be held during january 17-23, 2015.

Scouts and Guides foster personality development of the students and help them imbibe a sense of social responsibility. They become disciplined and courageous, and are in forefront during critical times. I am sure that Jamborette - 2015 will contribute to the development of young people in achieving their full physical, intellectual, emotional, social and spiritual potentials as individuals, as responsible citizens and as member of local, national and international communities.

Many young people ask me to give them a message. My only message to the young people is the following:

"I want many young people to become famous in their chosen professions. If young people become famous, the institutions they come from becomes famous, the city and the state they hail from become famous and the country become famous. The future of the country will then be assured.

**(Professor C.N.R. Rao, F.R.S)**

**ಡಿ.ಹೆಚ್. ಶಂಕರಮೂರ್ತಿ**
ಸಭಾಪತಿ
ಕರ್ನಾಟಕ ವಿಧಾನ ಪರಿಷತ್ತು




ಕಛೇರಿ ದೂರವಾಣಿ : 2225 8
2203 3
ಫ್ಯಾಕ್ಸ್ : 2225 2
ನಿವಾಸ : 2234 0
ಕೊಠಡಿ ಸಂಖ್ಯೆ : 117, ಒಂದನೇ ಮ
ವಿಧಾನ ಸೌಧ, ಬೆಂಗಳೂರು – 560

ಸಂಖ್ಯೆ: ಕವಿಪ : ಸಕ : 5053 : 2014-15

ದಿನಾಂಕ : 01-01-2



## –: ಸಂದೇಶ :–

27ನೇ ಕರ್ನಾಟಕ ರಾಜ್ಯ ಸ್ಕೌಟ್ಸ್ ಮತ್ತು ಗೈಡ್ಸ್ ಜಾಂಬೋರೇಟ್–2015ನ್ನು ದಿನಾಂಕ 17 ಜನವರಿ 2015 ರಿಂದ 23. ಜನವರಿ 2015ರವರೆಗೆ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್, ಕರ್ನಾಟಕ ಇವರು ಬೆಂಗಳೂರು ಗ್ರಾಮಾಂತರ ಜಿಲ್ಲೆಯಾದ ದೊಡ್ಡಬಳ್ಳಾಪುರದಲ್ಲಿ ಏರ್ಪಡಿಸಿರುವ ವಿಷಯ ತಿಳಿದು ಸಂತೋಷವಾಯಿತು.

ಈ ಶುಭ ಸಂದರ್ಭದಲ್ಲಿ ಜಾಂಬೋರೇಟ್ ಸಂಘಟನಾ ಸಮಿತಿಯು ಶೈಕ್ಷಣಿಕ ಹಾಗೂ ವಿಷಯಾಧಾರಿತವಾದ ಸ್ಕೌಟ್ಸ್ ಮತ್ತು ಗೈಡ್ಸ್ ಲೇಖನಗಳು ಮತ್ತು ಸಂದೇಶಗಳನ್ನೊಳಗೊಂಡ "ಸ್ಮರಣ ಸಂಚಿಕೆ" ಯನ್ನು ಹೊರತರುತ್ತಿರುವುದು ಸಂದರ್ಭೋಚಿತವಾಗಿದೆ.

ನಿಮ್ಮ ಸಂಸ್ಥೆಯು ವಿದ್ಯಾರ್ಥಿಗಳಲ್ಲಿರುವ ಸುಪ್ತ ಪ್ರತಿಭೆಯನ್ನು ಹೊರತರುವಲ್ಲಿ, ಅವರನ್ನು ಸಂವೇದನಾಶೀಲ ಹಾಗೂ ಜವಾಬ್ದಾರಿಯುತ ನಾಗರಿಕರನ್ನಾಗಿ ರೂಪಿಸುವಲ್ಲಿ ಯಶಸ್ವಿಯಾಗಲೆಂದು ಮನಸಾರೆ ಆಶಿಸುತ್ತೇನೆ. ನಿಮ್ಮ ಸಂಸ್ಥೆಯು ಇನ್ನೂ ಹೆಚ್ಚಿನ ಗುಣಾತ್ಮಕ ವಿದ್ಯಾರ್ಥಿಗಳನ್ನು ಸಮಾಜಕ್ಕೆ ನೀಡಲೆಂದು ಹಾಗೂ ಇನ್ನೂ ಹೆಚ್ಚಿನ ಪ್ರಗತಿ ಸಾಧಿಸಲೆಂದು ಹೃತ್ಪೂರ್ವಕವಾಗಿ ಹಾರೈಸುತ್ತೇನೆ.

ಡಿ.ಹೆಚ್.ಶ

**(ಡಿ.ಹೆಚ್.ಶಂಕರಮೂರ್ತಿ)**

ೋಡು ತಿಮ್ಮಪ್ಪ, ಬಿ.ಕಾಂ.ಬಿ.ಎಲ್
ೃಕ್ಷರು
ಟಕ ವಿಧಾನ ಸಭೆ




ವಿಧಾನ ಸೌಧ, ಬೆಂಗಳೂರು-560 233
ದೂರವಾಣಿ : 080-22258171
ಫ್ಯಾಕ್ಸ್ : 080-22251009
ದಿನಾಂಕ : 01-01-15



## -: ಸಂದೇಶ :-

ದಿನಾಂಕ : 17.01.2015 ರಿಂದ 23.01.2015ರ ವರೆಗೆ ಕರ್ನಾಟಕ ರಾಜ್ಯದ 27ನೇ ಸ್ಕೌಟ್ಸ್ ಮತ್ತು ಗೈಡ್ಸ್ ಜಾಂಬೋರೇಟ್- 2015ರ ಶಿಬಿರವನ್ನು ದೊಡ್ಡಬಳ್ಳಾಪುರದಲ್ಲಿ ನಡೆಸುವ ವಿಷಯ ತಿಳಿದು ಸಂತೋಷವಾಯಿತು. ಈ ಕಾರ್ಯಕ್ರಮಕ್ಕೆ ಹಾಗೂ ಶಿಬಿರದಲ್ಲಿ ಪಾಲ್ಗೊಳ್ಳುವ ಶಿಬಿರಾರ್ಥಿಗಳಿಗೆ ಯಶಸ್ಸನ್ನು ಕೋರುತ್ತಾ, ತತ್ಸಂಬಂಧ ಹೊರತರಲಿರುವ " **ಸ್ಮರಣ ಸಂಚಿಕೆ** " ಯು ಸ್ಕೌಟ್ಸ್ ಮತ್ತು ಗೈಡ್ಸ್‌ನ ಮೂಲ ಧ್ಯೇಯೋದ್ದೇಶಗಳನ್ನು ಬಿಂಬಿಸುವ ಕೈಗನ್ನಡಿಯಾಗಲೆಂದು ಆಶಿಸುತ್ತೇನೆ.

(ಕಾಗೋಡು ತಿಮ್ಮಪ್ಪ)

ಜಗದೀಶ ಶೆಟ್ಟರ
ವಿರೋಧ ಪಕ್ಷದ ನಾಯಕರು
ಕರ್ನಾಟಕ ವಿಧಾನ ಸಭೆ




ದೂರವಾಣಿ : 22258
ಫ್ಯಾಕ್ಸ್ : 222503
220335
ಕೊಠಡಿ ಸಂಖ್ಯೆ :
1ನೇ ಮಹಡಿ, ವಿಧಾನ ಸ
ಬೆಂಗಳೂರು – 560 0

ಸಂಖ್ಯೆ ಕವಿಸ/ವಿಪನಾ/583/2015

ದಿನಾಂಕ : 05-01-20



## –: ಸಂದೇಶ :–

ಮಾನ್ಯರೇ,

27ನೇ ರಾಜ್ಯ ಜಾಂಬೋರೇಟ್ ಕಾರ್ಯಕ್ರಮವನ್ನು ಬೆಂಗಳೂರು ಗ್ರಾಮಾಂತರ ಜಿಲ್ಲೆಯ ದೊಡ್ಡಬಳ್ಳಾಪುರದ ಡಾ॥ ಅನಿಬೆಸೆಂಟ್ ಸ್ಕೌಟ್ಸ್ ಮತ್ತು ಗೈಡ್ಸ್ ತರಬೇತಿ ಮತ್ತು ಶಿಬಿರ ಕೇಂದ್ರದಲ್ಲಿ ಆಯೋಜಿಸಿರುವುದು ಸಂತೋಷದ ಸಂಗತಿ.

ಭಾರತದಲ್ಲಿ ಬೆಂಗಳೂರಿನ ಬಿಷಪ್‌ಕಾಟನ್ ಶಾಲೆಯಲ್ಲಿ ನಿವೃತ್ತ ಸೈನ್ಯಾಧಿಕಾರಿ ಕ್ಯಾಪ್ಟನ್ ಬೇಕರಿಂದ 1909 ರಲ್ಲಿ ಪ್ರಾರಂಭವಾದ ಸ್ಕೌಟ್ಸ್ ಚಳುವಳಿಯು ಇಂದು ದೇಶಾದ್ಯಂತ ವಿಸ್ತರಿತವಾಗಿದೆ. ರಾಜ್ಯದಲ್ಲಿ ಮೂರು ವರ್ಷಗಳಿಗೊಮ್ಮೆ ನಡೆಯುವ ಸ್ಕೌಟ್ಸ್-ಗೈಡ್ಸ್‌ಗಳ ಮೇಳವು ವೈವಿಧ್ಯತೆಯಲ್ಲಿ ಏಕತೆಯನ್ನು ಸಾರುವ ಕಾರ್ಯಕ್ರಮವಾಗಿದೆ.

2015ನೇ ಜನವರಿ 17 ರಿಂದ 23 ರವರೆಗೆ ನಡೆಯುವ ಜಾಂಬೋರೇಟ್ ಕಾರ್ಯಕ್ರಮವು ಯಶಸ್ವಿಯಾಗಲೆಂದು ಶುಭ ಹಾರೈಸುತ್ತೇನೆ.

ವಂದನೆಗಳೊಂದಿಗೆ,

(ಜಗದೀಶ ಶೆಟ್ಟರ)

ವಿ. ದೇಶಪಾಂಡೆ
ಶಿಕ್ಷಣ ಮತ್ತು
ೋದ್ಯಮ ಸಚಿವರು




ಕೊಠಡಿ ಸಂಖ್ಯೆ : 314-314ಎ
ವಿಧಾನಸೌಧ
ಬೆಂಗಳೂರು – 560 001
ದೂರವಾಣಿ : 22250367
22033448

ಉಶಿಪ್ರಸ/85/2014-15

ದಿನಾಂಕ : 03-01-2015



## -: ಸಂದೇಶ :-

ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್, ಕರ್ನಾಟಕ ಈ ಸಂಸ್ಥೆಯ ವತಿಯಿಂದ 27ನೇ ಕರ್ನಾಟಕ ಸ್ಕೌಟ್ಸ್ ಮತ್ತು ಗೈಡ್ಸ್ ಜಾಂಬೋರೇಟ್-2015 ನಡೆಯುತ್ತಿರುವುದು ಪ್ರಶಂಸನೀಯ.

ಸದರಿ ಜಾಂಬೋರೇಟ್‌ನಲ್ಲಿ 33 ಜಿಲ್ಲೆಗಳಿಂದ ಹಾಗೂ ನೆರೆರಾಜ್ಯಗಳಿಂದ ಸ್ಕೌಟ್ಸ್, ಗೈಡ್ಸ್, ರೋವರ್ಸ್ ಮತ್ತು ರೇಂಜರ್ಸ್‌ಗಳು ಭಾಗವಹಿಸುತ್ತಿದ್ದು, ಇವರಲ್ಲಿ ಪರಸ್ಪರ ಕೌಶಲ್ಯ ವಿನಿಮಯ, ಸ್ನೇಹಭಾವ, ವಿಶ್ವಭ್ರಾತೃತ್ವ, ನಾಯಕತ್ವ ಗುಣ, ಸಹಕಾರ ಮನೋಭಾವ ಮತ್ತು ಸಾಮಾಜಿಕ ಮೌಲ್ಯದಂತಹ ಗುಣಗಳು ಅಭಿವೃದ್ಧಿಗೊಳ್ಳಲು ಒಂದು ಉತ್ತಮ ಅವಕಾಶವಾಗಿರುತ್ತದೆ.

ಈ ಸುಸಂದರ್ಭದಲ್ಲಿ ಪ್ರಕಟಿಸುತ್ತಿರುವ "ಸ್ಮರಣ ಸಂಚಿಕೆಯು" ವಿಷಯಾಧಾರಿತವಾದ ಲೇಖನಗಳೊಂದಿಗೆ ಸುಂದರವಾಗಿ ಮೂಡಿಬರಲೆಂದು ಹಾರೈಸುತ್ತೇನೆ. ಪ್ರಸ್ತುತ ಸಂದರ್ಭದಲ್ಲಿ ಸಂಸ್ಥೆಯ ಏಳಿಗೆಗೆ ಶ್ರಮಿಸಿರುವ ಎಲ್ಲರಿಗೂ ನನ್ನ ಅಭಿನಂದನೆಗಳನ್ನು ತಿಳಿಸುತ್ತೇನೆ.

(ಆರ್.ವಿ. ದೇಶಪಾಂಡೆ)

**ಡಿ.ಕೆ. ಶಿವಕುಮಾರ್**
ಇಂಧನ ಸಚಿವರು
ಸಂಖ್ಯೆ: ಇಂಸ/ಕ/2177/2014-15




ಕೊಠಡಿ ಸಂಖ್ಯೆ : 336, ವಿಧಾನ
ಬೆಂಗಳೂರು – 560
ದೂರವಾಣಿ ಸಂಖ್ಯೆ : 080-2225
080-2203
ಡಿಸೆಂಬರ್ 24,



## -: ಸಂದೇಶ :-

ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಸಂಸ್ಥೆಯ ವತಿಯಿಂದ ದೊಡ್ಡಬಳ್ಳಾಪುರ ತಾಲ್ಲೂಕು, ಅನಿಬೆಸೆಂಟ್ ಪಾರ್ಕ್‌ನಲ್ಲಿ 27ನೇ ರಾಜ್ಯ ಮಟ್ಟದ ಜಾಂಬೋರೇಟನ್ನು ಆಯೋಜಿಸಲಾಗಿರುವ ವಿಷಯ ತಿಳಿದು ಅತ್ಯಂತ ಹರ್ಷವೆನಿಸುತ್ತದೆ.

ಈ ರೀತಿ ಸಮಾವೇಶಗಳು ವಿದ್ಯಾರ್ಥಿಗಳಲ್ಲಿ ನಾಯಕತ್ವ ಗುಣ, ಸಹಕಾರ ಮನೋಭಾವನೆ ಹಾಗೂ ಸಾಮಾಜಿಕ ಮೌಲ್ಯಗಳನ್ನು ಮೂಡಿಸುವ ಜೊತೆಗೆ ಸಾರ್ವಜನಿಕ ಸಮಸ್ಯೆಗಳ ನಿವಾರಣೆಗೆ ಶ್ರಮಿಸುವಂತಹ ಸುವರ್ಣ ಅವಕಾಶವನ್ನು ಕಲ್ಪಿಸಿಕೊಡುತ್ತದೆ.

ಸಮಾವೇಶ ಯಶಸ್ವಿಯಾಗಲಿ ಸಮ್ಮೇಳನದ ಅಂಗವಾಗಿ ಹೊರ ತಂದಿರುವ ಸ್ಮರಣ ಸಂಚಿಕೆ ವಿಚಾರ ಪ್ರಚೋದಕ ವಿಷಯಗಳಿಂದ ಕೂಡಿ ಸರ್ವಗ್ರಾಹ್ಯ ಸಂಚಿಕೆಯಾಗಲಿ ಎಂದು ಹಾರೈಸುತ್ತೇನೆ.

(ಡಿ.ಕೆ. ಶಿವಕುಮಾರ್)

ಗದ್ಗುರು ಶ್ರೀ ಶಿವರಾತ್ರಿ ದೇಶಿಕೇಂದ್ರ ಮಹಾಸ್ವಾಮಿಗಳು
ಗದ್ಗುರು ಶ್ರೀ ವೀರಸಿಂಹಾಸನ ಮಹಾಸಂಸ್ಥಾನ ಮಠ
ತ್ತೂರು ಶ್ರೀಕ್ಷೇತ್ರ – 571 129, ಮೈಸೂರು ಜಿಲ್ಲೆ

ಮಠ (ಮೈಸೂರು) : (0821) 2548220/2548221
*ಫ್ಯಾಕ್ಸ್ : 2548219 ಸುತ್ತೂರು: (08221) 232223/232224
ಮಹಾವಿದ್ಯಾಪೀಠ (0821) 2548201
*ಫ್ಯಾಕ್ಸ್ : 2548218, ಸುತ್ತೂರು ಸದನ, ಬೆಂಗಳೂರು :
(080) 22970101 *ಫ್ಯಾಕ್ಸ್ : 22970100
* e-mail : jssashm@sancharnet.in
ದಿನಾಂಕ : 11-1-2015



## –: ಶುಭ ಹಾರೈಕೆ :–

ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್‌ನ ಕರ್ನಾಟಕ ರಾಜ್ಯ ಘಟಕವು 27ನೇ ಕರ್ನಾಟಕ ರಾಜ್ಯ ಸ್ಕೌಟ್ಸ್ ಮತ್ತು ಗೈಡ್ಸ್ ಜಾಂಬೋರೇಟ್ ಅನ್ನು ದೊಡ್ಡಬಳ್ಳಾಪುರದಲ್ಲಿ ನಡೆಸುತ್ತಿರುವುದು ಮೆಚ್ಚುಗೆಯ ಸಂಗತಿಯಾಗಿದೆ. ಈ ಸಮಾವೇಶದಲ್ಲಿ ಭಾರತದ ಅನೇಕ ರಾಜ್ಯಗಳಿಂದ 4500 ಸ್ಕೌಟ್ಸ್, ಗೈಡ್ಸ್, ರೋವರ್ಸ್ ಮತ್ತು ರೇಂಜರ್‌ಗಳು ಭಾಗವಹಿಸುತ್ತಿರುವುದು ರಾಷ್ಟ್ರೀಯ ಪ್ರಜ್ಞೆ ಹಾಗೂ ವಿಶ್ವಭ್ರಾತೃತ್ವದ ಸಂಕೇತವೇ ಆಗಿದೆ.

ನಿವೃತ್ತ ಜನರಲ್ ಲಾರ್ಡ್ ಬೇಡನ್ ಪೊವೆಲ್‌ರವರು 1907 ರಲ್ಲಿ ಸ್ಕೌಟ್ಸ್ ಚಳವಳಿಯನ್ನು ಮೊದಲಿಗೆ ಇಂಗ್ಲೆಂಡಿನಲ್ಲಿ ಪ್ರಾರಂಭಿಸಿದರು. ಯುವಜನರಲ್ಲಿ ನಿಸ್ವಾರ್ಥ ಸೇವಾ ಮನೋಭಾವವನ್ನು ಬೆಳೆಸುವುದು ಈ ಸಂಸ್ಥೆಯ ಉದ್ದೇಶವಾಗಿತ್ತು. ಆನಂತರ ಈ ಸಂಸ್ಥೆಯು 1909 ರಲ್ಲಿ ಭಾರತದಲ್ಲಿ ಪ್ರಾರಂಭವಾಯಿತು. ಹುಡುಗರಿಗಾಗಿ ಸ್ಕೌಟ್ಸ್ ಹುಡುಗಿಯರಿಗಾಗಿ ಗೈಡ್ಸ್ ವಿಭಾಗಗಳಿರುವ ಈ ಸೇವಾಸಂಸ್ಥೆಯು ದೇಶಾದ್ಯಂತ ಇರುವ ಶಾಲಾಕಾಲೇಜುಗಳಲ್ಲಿ ಲಕ್ಷಾಂತರ ಸೇವಾಕಾಂಕ್ಷಿಗಳಿಗೆ ತರಬೇತಿ ನೀಡುತ್ತಿದೆ. ಸೇವೆ, ಶಿಸ್ತು, ಮಾನವ ಪ್ರೀತಿಯನ್ನು ಅವರಲ್ಲಿ ಬೆಳೆಸಿ ಅವರನ್ನು ರಾಷ್ಟ್ರದ ಉತ್ತಮ ನಾಗರಿಕರನ್ನಾಗಿ ರೂಪಿಸುತ್ತಿದೆ. ಪ್ರಹಸನ ಪಿತಾಮಹ ದಿವಂಗತ ಶ್ರೀ ಟಿ.ಪಿ. ಕೈಲಾಸಂರವರ "ಟೊಳ್ಳುಗಟ್ಟಿ" ನಾಟಕಕ್ಕೆ ಈ ಸಂಸ್ಥೆಯು ಪ್ರೇರಣೆ ನೀಡಿರುವುದು ಗಮನಾರ್ಹವಾದುದಾಗಿದೆ.

ಸಮಾವೇಶದ ನೆನಪಿಗಾಗಿ ಸ್ಮರಣಸಂಚಿಕೆಯನ್ನು ಪ್ರಕಟಿಸುತ್ತಿರುವುದು ಔಚಿತ್ಯಪೂರ್ಣವಾಗಿದೆ. ಯುವಜನರ ವ್ಯಕ್ತಿತ್ವವಿಕಸನದ ಪ್ರತೀಕವಾಗಿ ಈ ಸ್ಮರಣಸಂಚಿಕೆ ಹೊರಬರಲೆಂದು ಹಾರೈಸುತ್ತೇವೆ.

ಜಗದ್ಗುರು ಶ್ರೀ ಶಿವರಾತ್ರಿ ದೇಶಿಕೇಂದ್ರ ಮಹಾಸ್ವಾಮಿಗಳು

ಶ್ರೀ ತರಳಬಾಳು ಜಗದ್ಗುರು
ಡಾ|| ಶಿವಮೂರ್ತಿ ಶಿವಾಚಾರ್ಯ ಮಹಾಸ್ವಾಮಿಗಳವರು



## -: ಶುಭ ಹಾರೈಕೆ :-

27ನೆಯ ಕರ್ನಾಟಕ ರಾಜ್ಯ ಸ್ಕೌಟ್ಸ್ ಮತ್ತು ಗೈಡ್ಸ್ ಜಾಂಬೋರೇಟನ್ನು ದೊಡ್ಡಬಳ್ಳಾಪುರದ ಡಾ|| ಅನಿಬೆಸೆಂಟ್ ಸ್ಕೌಟ್ಸ್ ಮತ್ತು ಗೈಡ್ಸ್ ರಾಜ್ಯ ತರಬೇತಿ ಹಾಗೂ ಶಿಬಿರ ಕೇಂದ್ರದಲ್ಲಿ ಜನವರಿ 17 ರಿಂದ 23 ರವರೆಗೆ ಏರ್ಪಡಿಸಿರುವುದನ್ನು ತಿಳಿದು ಸಂತೋಷವಾಯಿತು.

ರಾಜ್ಯದ 33 ಜಿಲ್ಲೆಗಳಿಂದ ಹಾಗೂ ನೆರೆರಾಜ್ಯಗಳಿಂದ 4500 ಸ್ಕೌಟ್ಸ್-ಗೈಡ್ಸ್, ರೋವರ್ಸ್ ಮತ್ತು ರೇಂಜರ್ಸ್‌ಗಳು ಈ ಜಾಂಬೋರೇಟ್‌ನಲ್ಲಿ ಭಾಗವಹಿಸುತ್ತಿರುವುದು ಶ್ಲಾಘನೀಯವಾದುದು. ನಾಯಕತ್ವಗುಣ, ಸಹಕಾರ, ಸಾಮಾಜಿಕ ಕಳಕಳಿ, ಪರಸ್ಪರರಲ್ಲಿ ಸ್ನೇಹಪರತೆ ಮತ್ತು ಶಿಸ್ತುಗಳನ್ನು ಬೆಳೆಸುವ ಈ ಜಾಂಬೋರೇಟ್ ನಿಜಕ್ಕೂ ತುಂಬಾ ಉಪಯುಕ್ತವಾದುದು. ಎಲ್ಲೆಲ್ಲೂ ವಿಭಜಕ ಶಕ್ತಿಗಳು ಒಡೆಯುವ ಕೆಲಸ ಮಾಡುತ್ತಿರುವ ಸಮಕಾಲೀನ ಸಂದರ್ಭದಲ್ಲಿ ಸ್ಕೌಟ್ಸ್ ಮತ್ತು ಗೈಡ್ಸ್‌ಗಳ ಸೇವೆಯು ತುಂಬಾ ಅಮೂಲ್ಯವಾದುದು.

ನೀವು ಆಯೋಜಿಸಿರುವ ಈ ಜಾಂಬೋರೇಟ್ ಯಶಸ್ವಿಯಾಗಿ ನಡೆಯಲಿ, ಕಾರ್ಯಕರ್ತರ ಶ್ರಮ ಸಾರ್ಥಕವಾಗಲಿ; ಈ ಸಂದರ್ಭದ ಸವಿನೆನಪಿಗಾಗಿ ಹೊರತರಲಿರುವ ಸ್ಮರಣ ಸಂಚಿಕೆಯು ಮೌಲಿಕ ಬರಹಗಳು ಮತ್ತು ಭಾವಚಿತ್ರಗಳನ್ನು ಒಳಗೊಂಡು ಸಂಗ್ರಹಯೋಗ್ಯ ಹೊತ್ತಗೆಯಾಗಿ ರೂಪುಗೊಳ್ಳಲಿ ಎಂದು ಮನಸಾರೆ ಹಾರೈಸುತ್ತೇವೆ.

ಇತಿ ಶುಭಾಶಂಸನೆಗಳು

ಶ್ರೀ ಶಿವಮೂರ್ತಿ ಶಿವಾಚಾರ್ಯ

**ಶ್ರೀ ತರಳಬಾಳು ಜಗದ್ಗುರು**
**ಡಾ|| ಶಿವಮೂರ್ತಿ ಶಿವಾಚಾರ್ಯ ಮಹಾಸ್ವಾಮಿಗಳವರು**

ವೀರೇಂದ್ರ ಹೆಗ್ಗಡೆಯವರು
ಧರ್ಮಸ್ಥಳ - 574 216
ಕನ್ನಡ, ಕರ್ನಾಟಕ

✆ : ಕಛೇರಿ: (08256) 277121
ಫ್ಯಾಕ್ಸ್ : 277116
E-mail : dvheggade@hotmail.com
ದಿನಾಂಕ : 09-01-2015



## -: ಶುಭ ಹಾರೈಕೆ :-

ಜನವರಿ 17 ರಿಂದ 23ರ ವರೆಗೆ ರಾಜ್ಯ ಮಟ್ಟದ ಸ್ಕೌಟ್ಸ್ ಮತ್ತು ಗೈಡ್ಸ್ ಜಾಂಬೋರೇಟ್ ಆಯೋಜಿಸಿರುವ ವಿಚಾರ ತಿಳಿದು ಸಂತೋಷವಾಯಿತು.

ಇಂದಿನ ಮಕ್ಕಳೇ ಮುಂದಿನ ಜನಾಂಗವಾಗಿದ್ದು, ಸಮಾಜದ ಸಭ್ಯ ನಾಗರಿಕರನ್ನಾಗಿ ರೂಪಿಸುವಲ್ಲಿ ಸ್ಕೌಟ್ಸ್ ಮತ್ತು ಗೈಡ್ಸ್ ಸಹಕಾರಿಯಾಗಿದೆ. ವಿದ್ಯಾರ್ಥಿಗಳಲ್ಲಿ ಶಿಸ್ತು, ಸಂಯಮ, ಸಹಕಾರ, ಸಮಾಜಸೇವೆ, ಪ್ರೀತಿ-ವಿಶ್ವಾಸ ಮೊದಲಾದ ಮಾನವೀಯ ಗುಣಗಳನ್ನು ಬೆಳಸುವಲ್ಲಿ ಇಂತಹ ಶಿಬಿರಗಳು ತುಂಬಾ ಉಪಯುಕ್ತವಾಗಿದೆ.

ಈ ಶುಭಾವಸರದಲ್ಲಿ ಸ್ಮರಣ ಸಂಚಿಕೆಯೊಂದನ್ನು ಪ್ರಕಟಿಸಲಿರುವುದು ಔಚಿತ್ಯಪೂರ್ಣವಾಗಿದೆ. ಸ್ಮರಣ ಸಂಚಿಕೆ ಪ್ರಕಾಶನಾ ಕಾರ್ಯ ಯಶಸ್ವಿಯಾಗಲೆಂದು ಹಾರೈಸುತ್ತೇನೆ.

ಶ್ರೀ ಮಂಜುನಾಥ ಸ್ವಾಮಿಯ ಅನುಗ್ರಹವಿರಲಿ.

ಇಂತಿ

ಡಿ. ವೀರೇಂದ್ರ ಹೆಗ್ಗಡೆ.

(ಡಿ. ವಿರೇಂದ್ರ ಹೆಗ್ಗಡೆಯವರು)

SRI SRINGERI MATH
V.R. Gowri Shankar
CEO & Administrator
Sri Sringeri Math and its Properties

Phone off : 08265 - 250123
Resi : 08265 - 250192
Fax : 08265 - 250792
Website : www.sringerisharadapeetham.org
(or) www.srigeri.net
E-mail : info@sringerishardapeetham.org
Date : 13-01-2015



## -: ಶುಭ ಹಾರೈಕೆ :-

ನೀವು ದಿನಾಂಕ 12-01-2015ರಂದು ಬರೆದ ಪತ್ರ ತಲುಪಿದೆ. ಪತ್ರದ ವಿಷಯಗಳನ್ನು ಶ್ರೀ ಶ್ರೀ ಜಗದ್ಗುರು ಮಹಾಸ್ವಾಮಿಗಳವರ ಪಾದಕಮಲಗಳಲ್ಲಿ ಸಾಷ್ಟಾಂಗ ಪ್ರಣಾಮ ಪೂರ್ವಕ ವಿಜ್ಞಾಪಿಸಲಾಯಿತು.

ಬೆಂಗಳೂರು ಗ್ರಾಮಾಂತರ ಜಿಲ್ಲೆಯ ದೊಡ್ಡಬಳ್ಳಾಪುರದಲ್ಲಿ 27ನೇ ಕರ್ನಾಟಕ ರಾಜ್ಯ ಸ್ಕೌಟ್ಸ್ ಮತ್ತು ಗೈಡ್ಸ್ ಜಾಂಬೋರೇಟ್‌ನ್ನು ದಿನಾಂಕ 17-1-2015 ರಿಂದ 23-1-2015ರ ವರೆಗೆ ಹಮ್ಮಿಕೊಂಡಿರುವ ಮತ್ತು ಈ ಸಂದರ್ಭದಲ್ಲಿ ಸುಮಾರು 4500 ಸ್ಕೌಟ್ಸ್, ಗೈಡ್ಸ್, ರೋವರ್ಸ್ ಮತ್ತು ರೇಂಜರ್ಸ್‌ಗಳು 33 ಜಿಲ್ಲೆಗಳಿಂದ ಜಾಂಬೋರೇಟ್‌ನಲ್ಲಿ ಭಾಗವಹಿಸುವ ವಿಚಾರವನ್ನು ಹಾಗೂ ಇದರ ಸವಿನೆನಪಿಗಾಗಿ ''ಸ್ಮರಣ ಸಂಚಿಕೆ'' ಹೊರತರುತ್ತಿರುವ ವಿಷಯವನ್ನು ಅರಿತು ಶ್ರೀ ಶ್ರೀಗಳವರು ಬಹಳ ಸಂತೋಷಪಟ್ಟಿರುತ್ತಾರೆ.

ಶ್ರೀ ಶಾರದಾ ಚಂದ್ರಮೌಳೀಶ್ವರರ ಕೃಪೆಯಿಂದ ನೀವು ಹಮ್ಮಿಕೊಂಡಿರುವ ಸಮಾರಂಭವು ಯಶಸ್ವಿಯಾಗಿ ಪೂರ್ತಿಗೊಳ್ಳಲಿ, ಇದರಲ್ಲಿ ಪಾಲ್ಗೊಂಡ ಸಕಲರಿಗೂ ಪೂರ್ಣ ಪ್ರಮಾಣದ ಪ್ರಯೋಜನ ಲಭಿಸಲಿ ಹಾಗೂ ಈ ಸಂದರ್ಭದಲ್ಲಿ ಬಿಡುಗಡೆಗೊಳ್ಳುವ ''ಸ್ಮರಣ ಸಂಚಿಕೆ''ಯು ವಿಷಯಾಧಾರಿತ ಸ್ಕೌಟ್ಸ್ ಮತ್ತು ಗೈಡ್ಸ್ ಲೇಖನಗಳಿಂದೊಡಗೂಡಿ ಸಂಗ್ರಹಯೋಗ್ಯ ಗ್ರಂಥವಾಗಿ ಮೂಡಿಬರಲಿ ಎಂದು ಶ್ರೀ ಶ್ರೀಗಳವರು ಆಶೀರ್ವದಿಸಿ ಅನುಗ್ರಹಿಸಿರುವ ಆಶೀರ್ಮಂತ್ರಾಕ್ಷತೆ ಮತ್ತು ಶ್ರೀ ಶಾರದಾ ಅರ್ಚನಾ ಪ್ರಸಾದವನ್ನು ಇದರೊಂದಿಗೆ ಕಳುಹಿಸಿರುತ್ತೇವೆ.

V. R. Gowrishankar

ವಿ.ಆರ್. ಗೌರಿಶಂಕರ್

॥ ಶ್ರೀ ಶಿವಮೂರ್ತಿ ಮುರುಘಾ ಶರಣರು
ವಕೇಂದ್ರ, ಶ್ರೀ ಮುರುಘಾಮಠ
ದುರ್ಗ - 577 502
ರವಾಣಿ : 08194 - 222250

ದಿನಾಂಕ : 08-01-2015



## -: ಶುಭ ಹಾರೈಕೆ :-

ರಾಜಕೀಯ ಸೋಂಕಿಲ್ಲದೆ ಯುವಜನತೆಯಲ್ಲಿ ಶೈಕ್ಷಣಿಕ ಜಾಗೃತಿಯನ್ನು ಮೂಡಿಸುವ ಧ್ಯೇಯೋದ್ದೇಶವನ್ನು ಹೊಂದಿರುವ ಸಂಸ್ಥೆ ಇದು. ಯುವಜನತೆ ಸಾಮಾಜಿಕ, ನೈತಿಕ ಮೌಲ್ಯ, ಸಹಕಾರ ಮನೋಭಾವ, ನಾಯಕತ್ವದ ಗುಣ ಹಾಗು ಸ್ನೇಹಪರ ಚಿಂತನೆಗಳನ್ನು ಮೈಗೂಡಿಸಿಕೊಳ್ಳಬೇಕಿದೆ. ಪ್ರತಿಯೊಬ್ಬರು ಉತ್ತಮ ನಾಗರಿಕರಾಗಬೇಕು. ರಾಷ್ಟ್ರ ಮತ್ತು ಅಂತಾರಾಷ್ಟ್ರೀಯ ಮಟ್ಟದಲ್ಲಿ ಶಾಂತಿ ನೆಲೆಗೊಳ್ಳುವಂತೆ ಪ್ರೇರಣೆ ನೀಡಬೇಕು. ಇಂತಹ ಹಲವಾರು ಮಹತ್ವದ ಯೋಜನೆಗಳೊಂದಿಗೆ 1907ರಲ್ಲಿ ಇಂಗ್ಲೆಂಡ್‌ನಲ್ಲಿ 20 ಯುವಕರೊಂದಿಗೆ ಪ್ರಾರಂಭವಾದ ಸ್ಕೌಟ್ಸ್ ಬೆಂಗಳೂರಿನಲ್ಲಿ ಟಿ.ಹೆಚ್.ಬೇಕರ್ ಅವರ ನೇತೃತ್ವದಲ್ಲಿ 1909 ರಿಂದ ಕಾರ್ಯಾರಂಭ ಮಾಡಿತು. ಅಧಿಕೃತವಾಗಿ ಪ್ರಾರಂಭವಾದದ್ದು 1911 ರಲ್ಲಿ. ನಂತರದ ದಿನಗಳಲ್ಲಿ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಜಂಟಿಯಾಗಿ ಕಾರ್ಯನಿರ್ವಹಿಸಲು ಪ್ರಾರಂಭಿಸಿ ಎಲ್ಲೆಡೆ ಶಿಸ್ತನ್ನು ಬೆಳೆಸುವ ಪ್ರಾಮಾಣಿಕ ಸೇವೆ ಮಾಡುತ್ತಿದೆ.

ಈ ಸಂಸ್ಥೆ ರಾಷ್ಟ್ರದಲ್ಲಿ ಏಕತೆ ಸಾಧಿಸಲು ವಿವಿಧ ಯೋಜನೆಗಳನ್ನು ರೂಪಿಸುತ್ತ ಬಂದಿದೆ. ಆರಂಭದಲ್ಲಿ ಸಣ್ಣ ಪ್ರಮಾಣದ ಕಾರ್ಯಕ್ರಮಗಳನ್ನು ರೂಪಿಸಿಕೊಳ್ಳುತ್ತ ಇಂದು ಪ್ರತಿಯೊಂದು ರಾಜ್ಯ, ಜಿಲ್ಲೆ, ತಾಲ್ಲೂಕು ಹಾಗು ಗ್ರಾಮಮಟ್ಟದಲ್ಲಿ ವ್ಯಾಪಿಸಿ ವಿದ್ಯಾರ್ಥಿಗಳಲ್ಲಿ ಶಿಸ್ತನ್ನು ಬೆಳೆಸುತ್ತಿರುವುದು ಸಂತಸವೇ ಸರಿ. ನನ್ನ ದೇಶಕ್ಕೆ ಪ್ರಾಮಾಣಿಕ ಸೇವೆ ಸಲ್ಲಿಸುತ್ತೇನೆ. ಅದು ನನ್ನ ಕರ್ತವ್ಯ. ದೇಶದ ಜನರಿಗೆ ಒಳ್ಳೆಯದನ್ನು ಮಾಡುತ್ತೇನೆ. ಕಾನೂನನ್ನು ಗೌರವಿಸುತ್ತೇನೆ ಎನ್ನುವ ಮಹತ್ವದ ಉದ್ದೇಶಗಳನ್ನು ಹೊಂದಿದೆ. ಸೋದರತ್ವದ ಭಾವನೆಯೊಂದಿಗೆ ಇಂತಹ ಮಾನವೀಯ ಮೌಲ್ಯಗಳನ್ನು ರೂಢಿಸಿಕೊಂಡಿರುವ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್, ಜನವರಿ 17 ರಿಂದ 23 ರವರೆಗೆ 27ನೇ ಕರ್ನಾಟಕ ರಾಜ್ಯ ಸ್ಕೌಟ್ಸ್ ಮತ್ತು ಗೈಡ್ಸ್ ಜಾಂಬೋರೇಟ್ ತರಬೇತಿ ಶಿಬಿರ ಹಮ್ಮಿಕೊಂಡಿರುವುದು ಅಭಿನಂದನೀಯ. ಇದೇ ಸಂದರ್ಭದಲ್ಲಿ ಕೌಶಲ್ಯ ಹಾಗು ವಿಶ್ವಭ್ರಾತೃತ್ವವನ್ನು ಬೆಳೆಸುವ ಸ್ಮರಣ ಸಂಚಿಕೆ ತರಲು ಸಮಿತಿಯವರು ಉದ್ದೇಶಿಸಿರುವುದು ಔಚಿತ್ಯಪೂರ್ಣವಾಗಿದೆ. ತನ್ನಿಮಿತ್ತ ನಡೆಯುವ ಎಲ್ಲ ಕಾರ್ಯಕ್ರಮಗಳು ಯಶಸ್ವಿಯಾಗಲೆಂದು ಹಾರೈಸುತ್ತೇನೆ.

ಬಸವ ಪ್ರೇರಣೆಗಳೊಂದಿಗೆ

(ಡಾ॥ ಶಿವಮೂರ್ತಿ ಮುರುಘಾ ಶರಣರು)

**ಶ್ರೀ ಜಗದ್ಗುರು ತೋಂಟದಾರ್ಯ ಸಂಸ್ಥಾನಮಠ**

ಎಡೆಯೂರು-ಡಂಬಳ-ಗದಗ - 582 101

© : (08372) 238827, 236701, 235599

ದಿನಾಂಕ : 08-01-2015




## -: ಶುಭ ಹಾರೈಕೆ :-

ತ್ರೀವಿಧ ದಾಸೋಹಿ ಡಾ|| ತೊಂಟದ ಸಿದ್ಧಲಿಂಗ ಮಹಾಸ್ವಾಮಿಗಳವರು

ಎಡೆಯೂರು ಶ್ರೀ ಜ.ತೋಂಟದಾರ್ಯ ಸಂಸ್ಥಾನಮಠ, ಡಂಬಳ-ಗದಗ

ಕರ್ನಾಟಕದ ರಾಜಧಾನಿ ಸಿಲಿಕಾನ್ ಸಿಟಿ ಎಂದು ಖ್ಯಾತವಾಗಿರುವ ಮತ್ತು ವೈದ್ಯಕೀಯ ಕ್ಷೇತ್ರದ ಸಾಧನೆಯಲ್ಲಿ ವಿಶ್ವಪಟಲದಲ್ಲಿ ಗುರುತಿಸಿಕೊಂಡಿರುವ ಬೆಂಗಳೂರು ಮಹಾನಗರದ ಬಳಿ ಇರುವ ದೊಡ್ಡಬಳ್ಳಾಪುರದಲ್ಲಿ ಇದೇ ದಿನಾಂಕ 17 ರಿಂದ 23ರ ವರೆಗೆ 27ನೇ ಕರ್ನಾಟಕ ಸ್ಕೌಟ್ಸ್ ಮತ್ತು ಗೈಡ್ಸ್ ಜಾಂಬೋರೇಟನ್ನು ಆಯೋಜಿಸಿರುವುದು ಮತ್ತು ಇದರಂಗವಾಗಿ ಸ್ಮರಣ ಸಂಚಿಕೆಯನ್ನು ಪ್ರಕಟಿಸಲು ಉದ್ದೇಶಿಸಿರುವುದನ್ನು ತಿಳಿದು ತುಂಬ ಸಂತಸವಾಯಿತು.

ಸಮವಸ್ತ್ರ ಧರಿಸಿದ, ಅಂತರರಾಷ್ಟ್ರೀಯ ಚಳವಳಿಯ ಸದಸ್ಯರಾದ ಸ್ಕೌಟ್ಸ್ ಮತ್ತು ಗೈಡ್ಸ್ (ವಿದ್ಯಾರ್ಥಿಗಳ) ಬೃಹತ್ ಸಮಾವೇಶವೇ ಈ ಜಾಂಬೋರೇಟ್ ಆಗಿರುವುದರಿಂದ ಇದೊಂದು ಬೃಹತ್ ಜಾತ್ರೆಯಂತೆ ಎಲ್ಲರಿಗೂ ಖುಶಿ ತರುವಂತಹದಾಗಿದೆ. ಸ್ಕೌಟ್ಸ್ ಮತ್ತು ಗೈಡ್ಸ್‌ಗಳಿಂದ ಅನೇಕ ದೊಡ್ಡ ದೊಡ್ಡ ಕೆಲಸಗಳಾಗಿರುವುದನ್ನು ನಾವು ಕಂಡಿದ್ದೇವೆ. ಒಂದರ್ಥದಲ್ಲಿ ಇವರೆಲ್ಲರೂ ಕಾಯಕಜೀವಿಗಳಾಗಿದ್ದಾರೆ. ಇಂತಹ ಸ್ಕೌಟ್ಸ್ ಮತ್ತು ಗೈಡ್ಸ್‌ಗಳು ಜಾಂಬೋರೇಟನಲ್ಲಿ ಭಾಗವಹಿಸುವುದರಿಂದ ನಾಯಕತ್ವ ಗುಣ, ಸಹಕಾರ ಮನೋಭಾವ, ಸಾಮಾಜಿಕ ಮೌಲ್ಯ, ಸ್ನೇಹಭಾವ ಹೊಂದಿಕೊಳ್ಳುವ ಗುಣಗಳು ಹೆಚ್ಚಾಗಿ ಮುಂದೆ ದೇಶಸೇವೆ ಮಾಡಲು ಸ್ಫೂರ್ತಿಯನ್ನು ಒದಗಿಸುತ್ತವೆ. ಇಂತಹ ಸ್ಫೂರ್ತಿಯ ಸೆಲೆಯಾಗಿರುವ ಜಾಂಬೋರೇಟ್ ಹಮ್ಮಿಕೊಂಡಿರುವುದು ಸುವರ್ಣಪುಷ್ಪಕ್ಕೆ ಸುವಾಸನೆಯನ್ನು ಲೇಪಿಸಿದಂತಾಗಿದೆ.

ಸಮಾರಂಭ ಯಶಸ್ವಿಯಾಗಲಿ, ಇದರಂಗವಾಗಿ ಮೂಡಿಬರಲಿರುವ ಸ್ಮರಣಸಂಚಿಕೆ ಸರ್ವಾಂಗಸುಂದರವಾಗಿರಲಿ, ಭಾಗವಹಿಸುವ ಎಲ್ಲರಿಗೂ ಭಾರತಮಾತೆಯ ಕೃಪಾಶೀರ್ವಾದ ಲಭಿಸಲಿ ಎಂದು ಹಾರೈಕೆ.

**ಜಯಬಸವ**

ಶ್ರೀ ಯದುಗಿರಿ ಯತಿರಾಜ ನಾರಾಯಣ ರಾಮಾನುಜ ಜೀಯರ್
ಯದುಗಿರಿ ಯತಿರಾಜ ಮಠ
ರಾಯಣಪುರಂ
ಕೋಟೆ-571 431, ಮಂಡ್ಯ ಜಿಲ್ಲೆ
199, ಸಂಪಿಗೆ ರಸ್ತೆ, 11ನೇ ಅಡ್ಡರಸ್ತೆ, ಮಲ್ಲೇಶ್ವರಂ
ಳೂರು - 560 003

✆ : (08372) 238827,
236701, 235599
ದಿನಾಂಕ : 13-01-2015



## -: ಶುಭ ಹಾರೈಕೆ :-

27ನೇ ಕರ್ನಾಟಕ ರಾಜ್ಯ ಸ್ಕೌಟ್ಸ್ ಮತ್ತು ಗೈಡ್ಸ್ ಜಾಂಬೋರೇಟ್ ದಿನಾಂಕ 17 ರಿಂದ 23 ಜನವರಿ 2015 ರವರೆಗೆ ಏರ್ಪಡಿಸಿರುವ ವಿಚಾರ ತಿಳಿದು ಸಂತೋಷವಾಗಿದೆ.

ಇಂತಹ ಸಮಾವೇಶಗಳಿಂದ ವಿದ್ಯಾರ್ಥಿಗಳ ಕೌಶಲ್ಯ ಅಭಿವೃದ್ಧಿಯಾಗುವುದಲ್ಲದೆ ಒಳ್ಳೆಯ ಸೌಹಾರ್ದ ವಾತಾವರಣ ಸೃಷ್ಟಿಯಾಗುತ್ತದೆ. ಕರ್ನಾಟಕದ ರಾಜ್ಯ ಸ್ಕೌಟ್ಸ್ ಮತ್ತು ಗೈಡ್ಸ್ ನಮ್ಮ ದೇಶಕ್ಕೆ ಕೊಡುವ ಅಮೂಲ್ಯ ಕಾಣಿಕೆ ಇದು. ನಮ್ಮ ದೇಶದ ಅಭಿವೃದ್ಧಿಯಲ್ಲಿ ಇದು ಮಹತ್ವದ ಪಾತ್ರವಹಿಸುತ್ತದೆ. ಈ ಕೈಂಕರ್ಯವನ್ನು ಮಾಡುತ್ತಿರುವ ಕರ್ನಾಟಕದ ಭಾರತ್ ಸ್ಕೌಟ್ಸ್ ಮತ್ತ ಗೈಡ್ಸ್ ಅಭಿನಂದನೆಗೆ ಅರ್ಹರು.

ಇವರು ಪ್ರಕಾಶಗೊಳಿಸುತ್ತಿರುವ ''ಸ್ಮರಣ ಸಂಚಿಕೆ'' ಗೆ ಎಲ್ಲಾ ಶುಭ ಸಮಸ್ತ ಮಂಗಳವನ್ನು ಆಶಿಸುತ್ತೇವೆ.

**ಶ್ರೀ ಶ್ರೀ ಯದುಗಿರಿ ಯತಿರಾಜ ಜೀಯರ್ ಪರವಾಗಿ**

ಕಾರ್ಯದರ್ಶಿ

**RAMAKRISHNA MATH**
Bull Temple Road
Bengaluru - 560 019

✆ : 2661 3149, 2667 1010
E-mail : rkmfive@gmail.com
ದಿನಾಂಕ : 09-01-2015



## -: ಸಂದೇಶ :-

ಕರ್ನಾಟಕ ಸ್ಕೌಟ್ಸ್ ಮತ್ತು ಗೈಡ್ಸ್ ಸಂಸ್ಥೆಯು, ವಿಶ್ವದ ಮಹಾಸಂಸ್ಥೆಯ ಅಂಗವಾಗಿದ್ದು ಹಲವು ದಶಕಗಳಿಂದ ಸಾಮಾಜಿಕ ಸೇವೆ ಮಾಡುತ್ತಿದೆ. ಈ ಸಂಸ್ಥೆಯು ವಿಶ್ವಭ್ರಾತೃತ್ವವನ್ನೂ, ಸಮಾಜಸೇವಾ ಮನೋಭಾವವನ್ನೂ ಜನಸಮೂಹದಲ್ಲಿ ಮೂಡಿಸುತ್ತದೆ.

ಈ ಸಮಾರಂಭವು ಯಶಸ್ವಿಯಾಗಿ ನಡೆಯಲೆಂದು, ಭಗವಂತನಲ್ಲಿ ನಮ್ಮ ಪ್ರಾರ್ಥನೆ.

ಭಾಗವತ್ಸೇವೆಯಲ್ಲಿ ನಿಮ್ಮವ,

ಸ್ವಾಮಿ ಹರ್ಷಾನಂದ

**ಸ್ವಾಮಿ ಹರ್ಷಾನಂದ**

ಜ್.ಕೆ. ಪಾಟೀಲ್
ಮೀಣಾಭಿವೃದ್ಧಿ ಮತ್ತು
ಚಾಯತ್ ರಾಜ್ ಸಚಿವರು ಹಾಗೂ
ಗ ಜಿಲ್ಲಾ ಉಸ್ತುವಾರಿ ಸಚಿವರು
ಖ್ಯೆ: ಗ್ರಾಅಪರಾ/ಸ/9909/2014-15




ದೂರವಾಣಿ ಸಂಖ್ಯೆ : 22258094
22033492
ಫ್ಯಾಕ್ಸ್ : 22258094
ಕೊಠಡಿ ಸಂಖ್ಯೆ : 329
ವಿಧಾನ ಸೌಧ
ಬೆಂಗಳೂರು – 560 001
03-01-2015



## -: ಸಂದೇಶ :-

"ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್, ಕರ್ನಾಟಕ 2015ನೇ ಸಾಲಿನ ಜಾಂಬೋರೇಟ್" ಸಂದರ್ಭದ ಸವಿನೆನಪಿಗಾಗಿ ್ಮರಣ ಸಂಚಿಕೆ"ಯನ್ನು ಹೊರತರುತ್ತಿರುವುದು ಹರ್ಷ ತಂದಿದೆ.

ಪ್ರತಿಭಾವಂತ ಯೋಧ, ಗುಪ್ತಚಾರ ಹಾಗೂ ಸೇನಾನಿಯಾಗಿದ್ದ ಬೇಡನ್ ಪೊವೆಲ್ ಅಂದು ಪ್ರಾರಂಭಿಸಿದ ಸ್ಕೌಟ್ ಗೂ ಗೈಡ್ ಆಂದೋಲನ ಮಾನವನ ಉದಾತ್ತ ಚಟುವಟಿಕೆಯಾಗಿತ್ತು. ಮೇಫ್‌ಕಿಂಗ್ ಪಟ್ಟಣದ ಮುತಿಗೆಯ ಮಯದಲ್ಲಿ ಅವರು ತೋರಿದ ಸಂಘಟನಾಶಕ್ತಿ ವಿಶೇಷವಾದದ್ದು. ಸೈನ್ಯಕ್ಕಷ್ಟೆ ಅಲ್ಲದೆ ಸಾಮಾಜಿಕ ಜೀವನದ ರ್ಯಗಳನ್ನೂ ನಿರ್ದೇಶಿಸಿದರು. ಅವರಿಗೆ ನೆರವಾದವರು ಸ್ಕೌಟ್ಸ್ ಹಾಗೂ ಗೈಡ್ಸ್ ಯುವಸಮೂಹ. ಅಂದು ಅತಿ ಗಂಭೀರ ರಿಸ್ಥಿತಿಯನ್ನೂ ಹಗುರವೆಂಬಂತೆ ಮಾತನಾಡಿ ಜನರನ್ನು ಹುರಿದುಂಬಿಸಿದರು, ಆಹಾರ ಸಾಮಗ್ರಿಗಳ ಸಮರ್ಪಕ ಹಂಚಿಕೆ, ಥಮ ಚಿಕಿತ್ಸಾ ಘಟಕಗಳು ತುರ್ತು ಸೇವೆ ನೀಡಿದರು ಮೇಫ್‌ಕಿಂಗ್ ಜಯಗಳಿಸಿತು. ನಿವೃತ್ತ ನಂತರ ಪೋವೆಲ್ ತಾವೇ ್ಟಿಂಗ್ ಆರಂಭಿಸಿದರು. ಇಂಗ್ಲೆಂಡಿನ ಹುಡುಗರಲ್ಲಿ ಸ್ಕೌಟಿಂಗ್ ಆಂದೋಲನವನ್ನು ಸಂಘಟಿಸಬೇಕೆಂದು ಸರ್ಕಾರದಿಂದ ದೇಶಿತರಾದರು. 1920ರಲ್ಲಿ ಮೊಟ್ಟಮೊದಲ ಸ್ಕೌಟ್ ಜಂಬೂರಿಯಲ್ಲಿ ಪೊವೆಲ್ "ಪ್ರಧಾನ ಸ್ಕೌಟ್" ಎಂದು ೋಷಿಸಲ್ಪಟ್ಟರು. ಕಾಲಕ್ರಮದಲ್ಲಿ ಹುಡುಗಿಯರೂ ಈ ಚಳವಳಿಯನ್ನು ಕೋರಿದಾಗ ಪೊವೆಲ್‌ರವರ ಸೋದರಿ ಅಗ್ನೆಸ್ ಡನ್ ಪೊವೆಲ್‌ರು ಗರ್ಲ್‌ಗೈಡ್ ಚಳವಳಿಯನ್ನೂ ಆರಂಭಿಸಿದರು. ಇಂದು ವಿಶ್ವದಾದ್ಯಂತ ಈ ಪ್ರಕ್ರಿಯೆ ಜೀವಂತವಾಗಿದೆ. ೋಟಿಗಟ್ಟಲೆ ವಿದ್ಯಾರ್ಥಿ-ವಿದ್ಯಾರ್ಥಿನಿಯರು ಈ ಕ್ಷೇತ್ರದಲ್ಲಿ ಸೇವೆ ನೀಡಿರುತ್ತಾರೆ. ಪ್ರಸ್ತುತ ಜಾಂಬೋರೇಟ್‌ನಲ್ಲಿ ಸಾವಿರಾರು ್ಯಾರ್ಥಿ-ವಿದ್ಯಾರ್ಥಿನಿಯರು ರಾಜ್ಯಾದ್ಯಂತ ಮತ್ತು ನೆರೆ ರಾಜ್ಯಗಳಿಂದ ಬಂದು ಭಾಗವಹಿಸುತ್ತಿರುವುದು ಭಿನಂದನೀಯವಾಗಿದೆ.

ತಾವು ಬಿಡುಗಡೆ ಮಾಡುತ್ತಿರುವ ಸ್ಮರಣ ಸಂಚಿಕೆಯು ಸಂಸ್ಥೆಯ ಕಾರ್ಯಚಟುವಟಿಕೆಗಳ ಹಾಗೂ ಇದುವರೆಗೆ ಇದರ ನ್ನತಿಗಾಗಿ ಶ್ರಮಿಸಿದವರ ಹಾಗೂ ಯಶೋಗಾಥೆಗಳಿಗೆ ಕಾರಣಕರ್ತರಾಗಿರುವವರ ಪರಿಚಯಾತ್ಮಕ ಮಾಹಿತಿಗಳನ್ನುಳ್ಳ ಪಯುಕ್ತ, ಸಂಗ್ರಹಯೋಗ್ಯ, ಹಾಗೂ ಮೌಲ್ಯಯುತ ಹೊತ್ತಗೆಯಾಗಿ ಮೂಡಿಬರಲೆಂದು ಬಯಸುತ್ತೇನೆ.

(ಎಚ್.ಕೆ. ಪಾಟೀಲ್)

**ಟಿ.ಬಿ. ಜಯಚಂದ್ರ**
ಕಾನೂನು, ಸಂಸದೀಯ ವ್ಯವಹಾರಗಳು,
ಪಶುಸಂಗೋಪನಾ ಮತ್ತು ಮುಜರಾಯಿ ಸಚಿವರು




ಮೇಲ್ : lawministeroffice@gmail.co
ದೂರವಾಣಿ : ಕಛೇರಿ : 222546
ಫ್ಯಾಕ್ಸ್ : 220334
ಕೊಠಡಿ ಸಂಖ್ಯೆ : 327, 3ನೇ ಮಹ
ವಿಧಾನಸೌಧ, ಬೆಂಗಳೂರು – 560 0
ದಿನಾಂಕ : 31-12-20



# -: ಸಂದೇಶ :-

ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಸಂಸ್ಥೆಯ ಕರ್ನಾಟಕ ಶಾಖೆಯು 27ನೇ ಕರ್ನಾಟಕ ಸ್ಕೌಟ್ಸ್ ಮತ್ತು ಗೈಡ್ಸ್ ಜಾಂಬೋರೇಟ್-2015ನ್ನು ಆಯೋಜಿಸುತ್ತಿದ್ದು, ಈ ಸಂದರ್ಭದಲ್ಲಿ "ಸ್ಮರಣ ಸಂಚಿಕೆ"ಯನ್ನು ಹೊರ ತರುವ ವಿಚಾರ ತಿಳಿದು ಸಂತೋಷವಾಯಿತು.

ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಸಂಸ್ಥೆಯು ಮುಂದಿನ ಪ್ರಜೆಗಳಾದ ಇಂದಿನ ಮಕ್ಕಳಲ್ಲಿ ವಿಶೇಷವಾಗಿ ವಿದ್ಯಾರ್ಥಿ ಮತ್ತು ವಿದ್ಯಾರ್ಥಿನಿಯರಲ್ಲಿ ಅಡಗಿರುವ ಕೌಶಲ್ಯಗಳನ್ನು ಅಭಿವೃದ್ಧಿಗೊಳಿಸಲು ಸಕ್ರಿಯವಾಗಿ ಮತ್ತು ಶ್ರಮಿಸುತ್ತಿರುವ ಒಂದು ಸಮಾಜ ಸೇವಾ ಮನೋಭಾವದ ಸಂಸ್ಥೆಯಾಗಿರುತ್ತದೆ. ವ್ಯಾಯಾಮ ಪ್ರದರ್ಶನ, ಪಥಚಲನ, ನಗರ ಮೆರವಣಿಗೆ, ಸಾಹಸಮಯ ಚಟುವಟಿಕೆಗಳು, ಸಮುದಾಯ ಸೇವೆ, ಸಾಂಸ್ಕೃತಿಕ ಪ್ರದರ್ಶನ ಮುಂತಾದ ಚಟುವಟಿಕೆಗಳಲ್ಲಿ ಮಕ್ಕಳನ್ನು ತೊಡಗಿಸಿ ಅವರನ್ನು ದೃಢಕಾಯವಾಗಿಸುವುದರ ಜೊತೆಗೆ ದೇಶ ಸೇವೆಯ ಮೂಲಕ ದೇಶಾಭಿಮಾನ ಬೆಳೆಸುವ ಮಹತ್ತರವಾದ ಕಾಣಿಕೆಯನ್ನು ಸಹ ಈ ಸಂಸ್ಥೆ ಒದಗಿಸುತ್ತಿರುವುದು ಹೆಮ್ಮೆಯ ಸಂಗತಿ, ಜಾಂಬೋರೇಟ್‌ನಲ್ಲಿ ಭಾಗವಹಿಸುವುದರಿಂದ ಸ್ಕೌಟ್ಸ್-ಗೈಡ್ಸ್‌ಗಳಲ್ಲಿ ನಾಯಕತ್ವಗುಣ, ಸಹಕಾರ ಮನೋಭಾವ, ಸಾಮಾಜಿಕ ಮೌಲ್ಯ, ಸ್ನೇಹಭಾವ, ಹೊಂದಿಕೊಳ್ಳುವ ಗುಣಗಳು, ಅಭಿವೃದ್ಧಿಗೊಳ್ಳುವುದನ್ನು ಗಮನಿಸಬಹುದಾಗಿದೆ.

ಉದ್ದೇಶಿತ ಜಾಂಬೋರೇಟ್ ಯಶಸ್ವಿಯಾಗಿ ನೆರವೇರಲಿ ಮತ್ತು ಸ್ಮರಣ ಸಂಚಿಕೆಯು ಸ್ಕೌಟ್ಸ್ ಮತ್ತು ಗೈಡ್ಸ್‌ಗಳಿಗೆ ಉಪಯುಕ್ತವಾಗುವ ಮಾಹಿತಿಗಳನ್ನು ಒಳಗೊಂಡು ಸುಂದರ ರೂಪದಲ್ಲಿ ಹೊರಬರಲಿ ಎಂದು ಹಾರೈಸುತ್ತೇನೆ.

(ಟಿ.ಬಿ. ಜಯಚಂದ್ರ)

., ಜಾರ್ಜ್
ಸಚಿವರು




ಕೊಠಡಿ ಸಂಖ್ಯೆ : 316
ವಿಧಾನಸೌಧ
ಬೆಂಗಳೂರು – 560 001
ದೂರವಾಣಿ : 22251798
ಆಂತರಿಕ : 22033489

, ಗೃಸ/2/2015

ದಿನಾಂಕ : 06-01-2015



## -: ಸಂದೇಶ :-

ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್, ಕರ್ನಾಟಕ ಈ ವತಿಯಿಂದ "**27ನೇ ಕರ್ನಾಟಕ ರಾಜ್ಯ ಸ್ಕೌಟ್ಸ್ ಮತ್ತು ಗೈಡ್ಸ್ ಜಾಂಬೋರೇಟ್–2015**"ನ್ನು ಡಾ. ಅನಿಬೆಸೆಂಟ್ ಸ್ಕೌಟ್ಸ್ ಮತ್ತು ಗೈಡ್ಸ್ ರಾಜ್ಯ ತರಬೇತಿ ಹಾಗೂ ಶಿಬಿರ ಕೇಂದ್ರ, ದೊಡ್ಡಬಳ್ಳಾಪುರ, ಬೆಂಗಳೂರು ಗ್ರಾಮಾಂತರ ಜಿಲ್ಲೆ. ಇಲ್ಲಿ ಆಯೋಜಿಸುತ್ತಿರುವುದು ತಿಳಿದು ಸಂತೋಷವಾಯಿತು. ಈ ಸುಸಂದರ್ಭದಲ್ಲಿ "ಸ್ಮರಣ ಸಂಚಿಕೆ" ಯೊಂದನ್ನು ಹೊರತರುತ್ತಿರುವುದು ಉತ್ತಮ ಕೆಲಸ. ಈ ಸ್ಮರಣ ಸಂಚಿಕೆಯು ಮುಂದಿನ ಪೀಳಿಗೆಗೆ ಮಾರ್ಗದರ್ಶನ ನೀಡುವಂತಹ ಉಪಯುಕ್ತ ಸಂಚಿಕೆಯಾಗಲಿದೆ.

ಸ್ಕೌಟ್ಸ್ ಮತ್ತು ಗೈಡ್ಸ್‌ಗಳು ವಿಶ್ವಭ್ರಾತೃತ್ವದೊಂದಿಗೆ ಕೌಶಲ್ಯಗಳನ್ನು ಪ್ರದರ್ಶಿಸುವ ಹಾಗೂ ಐಕ್ಯತೆಯನ್ನು ಬೆಳೆಸಿಕೊಳ್ಳಲು ಈ ಜಾಂಬೋರೇಟ್ ಕಾರ್ಯಾಗಾರವು ಉತ್ತಮ ವೇದಿಕೆಯಾಗುವುದು. ಇದರಿಂದಾಗಿ ನಾಯಕತ್ವಗುಣ, ಸಹಕಾರ ಮಹೋಭಾವ, ಸಾಮಾಜಿಕ ಮೌಲ್ಯ, ಸ್ನೇಹಭಾವ, ಹೊಂದಿಕೊಳ್ಳುವ ಗುಣವನ್ನು ಅಭಿವೃದ್ಧಿಪಡಿಸಿಕೊಳ್ಳಲು ಸ್ಕೌಟ್ಸ್ ಮತ್ತು ಗೈಡ್ಸ್‌ಗಳಿಗೆ ಅನುವುಮಾಡಿಕೊಡುತ್ತದೆ.

ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಇವರ ಸೇವಾ ಮನೋಭಾವದ ಕಾರ್ಯವು ಶ್ಲಾಘನೀಯ ಹಾಗೂ ಅಭಿನಂದನಾರ್ಹ. ಈ ಸಂಸ್ಥೆಯಿಂದ ಇನ್ನು ಹೆಚ್ಚಿನ ಸಮಾಜಮುಖಿ ಕಾರ್ಯಗಳನ್ನು ಕೈಗೊಳ್ಳಲೆಂದು ಅಭಿಲಾಶಿಸುತ್ತ ಈ ಸುಸಂದರ್ಭದಲ್ಲಿ ಮನಪೂರ್ವಕವಾಗಿ ಶುಭಕೋರುತ್ತೇನೆ.

(ಕೆ.,ಜೆ. ಜಾರ್ಜ್)

ಯು.ಟಿ. ಖಾದರ್
ಆರೋಗ್ಯ ಮತ್ತು ಕುಟುಂಬ ಕಲ್ಯಾಣ
ಸಚಿವರು ಹಾಗೂ ಕೋಲಾರ ಜಿಲ್ಲಾ
ಉಸ್ತುವಾರಿ ಸಚಿವರು




ಕೊಠಡಿ ಸಂಖ್ಯೆ : 344 & 3
ವಿಕಾಸಸೌಧ, ಬೆಂಗಳೂರು - 560 0
ದೂ. ಸಂ. 080-22034781 /
ಫ್ಯಾಕ್ಸ್ : 223834
email : healthminister2013@gmail.c
ದಿನಾಂಕ 30-12-

ಸಂಖ್ಯೆ ಆಕುಕಸ/4359/G / 2014-15



## -: ಸಂದೇಶ :-

ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್, ಕರ್ನಾಟಕ ಸಂಸ್ಥೆಯ ವತಿಯಿಂದ ದಿ: 17-01-2015 ರಿಂದ 23-01-2015 ರವರೆಗೆ ಡಾ॥ ಅನಿಬೆಸೆಂಟ್ ಸ್ಕೌಟ್ಸ್ ಮತ್ತು ಗೈಡ್ಸ್ ರಾಜ್ಯ ತರಬೇತಿ ಹಾಗೂ ಶಿಬಿರ ಕೇಂದ್ರ, ದೊಡ್ಡಬಳ್ಳಾಪುರ, ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲಿ 27ನೇ ಕರ್ನಾಟಕ ಸ್ಕೌಟ್ಸ್ ಮತ್ತು ಗೈಡ್ಸ್ ಜಾಂಬೋರೇಟ್ -2015ನ್ನು ನಡೆಸುತ್ತಿರುವುದು ಅತ್ಯಂತ ಸಂತೋಷದ ವಿಷಯವಾಗಿದೆ. ಜಾಂಬೋರೇಟ್‌ನಲ್ಲಿ 4500 ಸ್ಕೌಟ್ಸ್, ಗೈಡ್ಸ್, ರೋವರ್ಸ್ ಮತ್ತು ರೇಂಜರ್ಸ್‌ಗಳು 33 ಜಿಲ್ಲೆಗಳಿಂದ ಹಾಗೂ ನೆರೆ ರಾಜ್ಯಗಳಿಂದ ಭಾಗವಹಿಸುತ್ತಿರುವುದರಿಂದ ಎಲ್ಲರಲ್ಲಿಯೂ ವಿಶ್ವಭ್ರಾತೃತ್ವವನ್ನು ಅಭಿವೃದ್ಧಿಪಡಿಸಿಕೊಳ್ಳಲು ಸಾಧ್ಯವಾಗುತ್ತದೆ ಹಾಗೂ ಕಾರ್ಯಕ್ರಮದಲ್ಲಿ ಸ್ಕೌಟ್ಸ್ - ಗೈಡ್ಸ್ ಕೌಶಲ್ಯಗಳನ್ನು ಪ್ರದರ್ಶಿಸಲು ಹಾಗೂ ಐಕ್ಯತೆಯನ್ನು ಬೆಳೆಸಿಕೊಳ್ಳಲು ಉತ್ತಮ ಅವಕಾಶವಾಗಿದ್ದು, ಹೀಗೆ ನಿರಂತರವಾಗಿ ತಮ್ಮ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ರಾಜ್ಯದಲ್ಲಿ ಸಾಮಾಜಿಕ, ಆರ್ಥಿಕ ಹಾಗೂ ಶೈಕ್ಷಣಿಕ ಬೆಳವಣಿಗೆಗೆ ತನ್ನದೇ ಆದ ವಿಶಿಷ್ಟವಾದ ಸೇವೆಯನ್ನು ನೀಡುತ್ತಾ ಬಂದಿರುವುದು ಸಂತೋಷದ ವಿಷಯವಾಗಿದೆ. ಜನವರಿ ಮಾಹೆಯಲ್ಲಿ 27ನೇ ಕರ್ನಾಟಕ ಸ್ಕೌಟ್ಸ್ ಮತ್ತು ಗೈಡ್ಸ್ ಜಾಂಬೋರೇಟ್-2015 ಹಮ್ಮಿಕೊಂಡಿದ್ದು. ಇದರ ಸವಿನೆನಪಿಗಾಗಿ " ಸ್ಮರಣ ಸಂಚಿಕೆ" ಹೊರ ತರುತ್ತಿರುವುದು ಸ್ವಾಗತಾರ್ಹ. ಇದೇ ರೀತಿಯಾಗಿ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಯಶಸ್ಸಿನ ಹಾದಿಯಲ್ಲಿ ಸಾಗಲೆಂದು ಈ ಸಂದರ್ಭದಲ್ಲಿ ಶುಭ ಹಾರೈಸುತ್ತೇನೆ.

(ಯು.ಟಿ. ಖಾದರ್)

.ಆರ್. ಪಾಟೀಲ್
ಜನೆ & ಸಾಂಖ್ಯಿಕ. ಮಾಹಿತಿ ತಂತ್ರಜ್ಞಾನ
ದಿಕ ತಂತ್ರಜ್ಞಾನ, ವಿಜ್ಞಾನ & ತಂತ್ರಜ್ಞಾನ
ಬಾಗಲಕೋಟೆ ಜಿಲ್ಲಾ ಉಸ್ತುವಾರಿ ಸಚಿವರು




ಕೊಠಡಿ ಸಂಖ್ಯೆ : 444, 445
4ನೇ ಮಹಡಿ, ವಿಕಾಸ ಸೌಧ
ಬೆಂಗಳೂರು – 560 001
ದೂರವಾಣಿ ಸಂ : 22250388
22034568



## -: ಸಂದೇಶ :-

ಮಾನ್ಯರೇ,

27ನೇ ಕರ್ನಾಟಕ ರಾಜ್ಯ ಸ್ಕೌಟ್ಸ್ ಮತ್ತು ಗೈಡ್ಸ್ ಜಾಂಬೋರೇಟ್ ನಿಮಿತ್ತ "ಸ್ಮರಣ ಸಂಚಿಕೆ" ಹೊರ ತರುತ್ತಿರುವ ವಿಷಯ ತಿಳಿದು ತುಂಬಾ ಸಂತೋಷವಾಯಿತು.

ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಸಂಸ್ಥೆಗೆ ತನ್ನದೇ ಆದ ಇತಿಹಾಸ ಮತ್ತು ಪರಂಪರೆ ಇದೆ. ವಿದ್ಯಾರ್ಥಿಗಳಲ್ಲಿ ಶಿಸ್ತು, ಶ್ರದ್ಧೆ, ಆತ್ಮವಿಶ್ವಾಸ, ಪ್ರಾಮಾಣಿಕತೆ, ಕ್ರಿಯಾಶೀಲತೆಯ ಜೊತೆ ನೈತಿಕ ತಳಹದಿಯ ಮೇಲೆ ವ್ಯಕ್ತಿತ್ವ ರೂಪಿಸಿಕೊಳ್ಳಲು ಮುಕ್ತ ವಾತಾವರಣ ಕಲ್ಪಿಸಿ ಕೊಡುತ್ತಿರುವುದು ಪ್ರತಿಯೊಬ್ಬರು ಅಭಿಮಾನ ಪಡುವ ಸಂಗತಿ. ಮಕ್ಕಳಲ್ಲಿ ಉಜ್ವಲವಾದ ದೇಶಾಭಿಮಾನ, ರಾಷ್ಟ್ರಾಭಿಮಾನ ಬೆಳೆಸುವಲ್ಲಿ ಹಗಲಿರುಳು ಶ್ರಮಿಸುತ್ತಿರುವ ಸ್ಕೌಟ್ಸ್ ಮತ್ತು ಗೈಡ್ಸ್ ಸಂಸ್ಥೆಯ ಸೇವೆ ಅನನ್ಯವಾದದ್ದು.

ಭವ್ಯ ಭಾರತದ ನಿರ್ಮಾಣಕ್ಕಾಗಿ ಇಂತಹ ಸಂಸ್ಥೆಗಳ ಸೇವೆ ಹಿಂದಿಗಿಂತಲೂ ಇಂದು ಹೆಚ್ಚು ಅಗತ್ಯವಾಗಿದೆ. ನೈತಿಕ ಮೌಲ್ಯಗಳು ಕುಸಿಯುತ್ತಿರುವ ಇವತ್ತಿನ ದಿನಗಳಲ್ಲಿ ಮೌಲ್ಯಗಳ ಮರುಸ್ಥಾಪನೆಗಾಗಿ ಶ್ರಮಿಸುತ್ತಿರುವ ಈ ಸಂಸ್ಥೆಯಿಂದ ನಾಡು ನುಡಿಗೆ ಇನ್ನಷ್ಟು, ಮತ್ತಷ್ಟು ಮೌಲಿಕ ಸೇವೆ ಸಲ್ಲಿಸುವಂತಾಗಲಿ, ಸ್ಮರಣ ಸಂಚಿಕೆ ಎಲ್ಲ ದೃಷ್ಟಿಯಿಂದ ಸುಂದರವಾಗಿ ಹೊರಬರಲಿ ಎಂದು ಹಾರೈಸುತ್ತೇನೆ.

ವಂದನೆಗಳೊಂದಿಗೆ,

ಗೆ,
ಮಾನ್ಯ ಶ್ರೀ ಪಿ.ಜಿ.ಆರ್. ಸಿಂಧ್ಯಾ
ರಾಜ್ಯ ಮುಖ್ಯ ಆಯುಕ್ತರು
ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್
ಕರ್ನಾಟಕ ರಾಜ್ಯ ಬೆಂಗಳೂರು

(ಎಸ್.ಆರ್.ಪಾಟೀಲ್)



ಕೌಟ್ಸ್ ಮತ್ತು ಗೈಡ್ಸ್ ಹಾಗೂ ದಳನಾಯಕರುಗಳ ಜೊತೆಯಲ್ಲಿ
ಶ್ರೀ. ಕಾಗೋಡು ತಿಮ್ಮಪ್ಪ, ವಿಧಾನ ಸಭಾಧ್ಯಕ್ಷರು.




ರಾಜ್ಯ ಕಾರ್ಯದರ್ಶಿಗಳಾದ ಶ್ರೀ. ಸಿದ್ದಯ್ಯರವರು
ವಿಶ್ವಪರ್ಯಟನೆ ಕಾರ್ಯಕ್ರಮವನ್ನು ವೀಕ್ಷಿಸುತ್ತಿರುವುದು.



ಧ್ವಜಾರೋಹಣ ಕಾರ್ಯಕ್ರಮದಲ್ಲಿ ದಳನಾಯಕರು.



ಕವಾಯತು ಕಾರ್ಯಕ್ರಮದಲ್ಲಿ ಪಾಲ್ಗೊಂಡಿರುವ ಸ್ಕೌಟ್ಸ್‌ಗಳು.





ಜಿಲ್ಲಾದರ್ಶನದಲ್ಲಿ ಭಾಗವಹಿಸಿರುವ ಸ್ಕೌಟ್ಸ್ ಮತ್ತು ಗೈಡ್ಸ್‌ಗಳು.



ದೊಡ್ಡಬಳ್ಳಾಪುರ ನಗರ ಪ್ರಮುಖ ಬೀದಿಗಳಲ್ಲಿ ಪಥ ಸಂಚಲನ ನಡೆಸುತ್ತಿರುವ ಸ್ಕೌಟ್ಸ್-ಗೈಡ್ಸ್‌ಗಳು.




ರಾಜ್ಯ ಜಾಂಬೂರೇಟ್ ಕಾರ್ಯಕ್ರಮಕ್ಕೆ ಆಗಮಿಸುತ್ತಿರುವ ಸ್ಕೌಟ್ಸ್-ಗೈಡ್ಸ್‌ಗಳು.



ಶೌಚಾಲಯಗಳು.





ಜಾಂಬೂರೇಟ್‌ನಲ್ಲಿ ವಾಸ್ತವ್ಯಕ್ಕಾಗಿ ನಿರ್ಮಿಸಿರುವ ಗುಡಾರಗಳು.



ಅಡಿಗೆಮನೆ.



ಆಹಾರ ವಿತರಣೆ ಮಾಡಲು ಸಿದ್ದವಿರುವ ರೋವರ್ಸ್/ರೇಂಜರ್ಸ್.



ಜಾಂಬೂರೇಟ್ ವೀಕ್ಷಿಸಲು ಆಗಮಿಸಿರುವ ಸಾರ್ವಜನಿಕರು ಮತ್ತು ಪೋಷಕರು.



ಕವಾಯತು ಪ್ರದರ್ಶನ ನೀಡುತ್ತಿರುವ ಸ್ಕೌಟ್ಸ್‌ಗಳು.



ಜಾಂಬೋರೇಟ್ ಕಾರ್ಯಕ್ರಮ ವೀಕ್ಷಿಸುತ್ತಿರುವ ದಳನಾಯಕರು.



ಸರ್ವ ಧರ್ಮ ಸಮನ್ವಯ ಪ್ರಾರ್ಥನೆ.




ಜಾಂಬೊರೇಟ್‌ನಲ್ಲಿ ಭಾಗವಹಿಸಿರುವ ಸ್ಕೌಟ್ಸ್-ಗೈಡ್ಸ್‌ಗಳಿಗೆ ಕೊಡುವ ಪ್ರಮಾಣ ಪತ್ರಗ

ವಿಜಯವಾಣಿ
VIJAYAVANI • BENGALURU

# ದೇಶಕ್ಕಾಗಿ ತುಡಿಯುವ ಮನಸ್ಸಿರಲಿ

## ಜಾಂಬೋರೇಟ್ ಶಿಬಿರದಲ್ಲಿ ರಾಜ್ಯಪಾಲ ವಿ.ಆರ್. ವಾಲಾ ಕರೆ



ದೊಡ್ಡಬಳ್ಳಾಪುರದ ಬೆಸೆಂಟ್ ಪಾರ್ಕ್ ನಲ್ಲಿ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಕರ್ನಾಟಕ ನೇತೃತ್ವದಲ್ಲಿ ಆಯೋಜಿಸಿದ್ದ 27ನೇ ರಾಜ್ಯ ಸ್ಕೌಟ್ಸ್ ಮತ್ತು ಗೈಡ್ಸ್ ಜಾಂಬೋರೇಟ್ ಶಿಬಿರಕ್ಕೆ ರಾಜ್ಯಪಾಲ ವಾಜೂಭಾಯಿ ರೂಡಾಭಾಯಿ ವಾಲಾ ಚಾಲನೆ ನೀಡಿದರು.

### ಸಂಸ್ಕಾರಯುತ ಶಿಕ್ಷಣ ಅಗತ್ಯ

ದೇಶದ ಮಹೋನ್ನತ ಶಕ್ತಿಯಾಗಿರುವ ಯುವಶಕ್ತಿಗೆ ಅಸಾಧ್ಯ ಎನಿಸುವುದು ಯಾವುದೂ ಇಲ್ಲ. ಬಿರುಗಾಳಿಯನ್ನು ಎದುರಿಸಿ ಗುದ್ದಾಡಬಲ್ಲ ಎದೆಗಾರಿಕೆ, ಸಾಮರ್ಥ್ಯ ಯುವಕರಿಗೆ ಇದೆ. ಈ ಶಕ್ತಿ ಪೋಲಾಗದಂತೆ ಸಶಕ್ತ ಭಾರತದ ನಿರ್ಮಾಣಕ್ಕೆ ಎಲ್ಲರೂ ಒಂದಾಗಬೇಕಿದೆ. ಮನುಷ್ಯತ್ವ ಪ್ರಧಾನ ಮತ್ತು ಸಂಸ್ಕಾರಯುತ ಶಿಕ್ಷಣ ಇಂದಿನ ಅಗತ್ಯ.

। ವಾಜೂಭಾಯಿ ವಾಲಾ, ರಾಜ್ಯಪಾಲ

**ದೊಡ್ಡಬಳ್ಳಾಪುರ:** ಪ್ರತಿಯೊಬ್ಬರೂ ಒಬ್ಬೊಬ್ಬರನ್ನು ಸ್ಕೌಟ್ಸ್ ಮತ್ತು ಗೈಡ್ಸ್‌ಗಳಾಗಿ ರೂಪಿಸುವ ಮೂಲಕ ದೇಶದ ಸಮಗ್ರತೆ ಮತ್ತು ಐಕ್ಯತೆಯನ್ನು ಪ್ರಚುರಪಡಿಸಿ ಸಾರ್ವಜನಿಕ ಸೇವೆಗೆ ಮುಂದಾಗಬೇಕು ಎಂದು ರಾಜ್ಯಪಾಲ ವಾಜೂಭಾಯಿ ರೂಡಾಭಾಯಿ ವಾಲಾ ಕರೆ ನೀಡಿದರು.

ಬೆಸೆಂಟ್ ಪಾರ್ಕ್‌ನಲ್ಲಿ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಕರ್ನಾಟಕ, ಬೆಂಗಳೂರು ಗ್ರಾಮಾಂತರ ಜಿಲ್ಲಾಡಳಿತ ಮತ್ತು ಸಾರ್ವಜನಿಕ ಶಿಕ್ಷಣ ಇಲಾಖೆ ನೇತೃತ್ವದಲ್ಲಿ 27ನೇ ರಾಜ್ಯ ಸ್ಕೌಟ್ಸ್ ಮತ್ತು ಗೈಡ್ಸ್ ಜಾಂಬೋರೇಟ್ ಶಿಬಿರಕ್ಕೆ ಚಾಲನೆ ನೀಡಿ ಮಾತನಾಡಿದರು. ಮಕ್ಕಳಿಂದ ವೃದ್ಧರವರೆಗೆ ದೇಶ ರಕ್ಷಕರಾಗಬೇಕು. ಇಸ್ರೇಲ್ ಜನರಂತೆ ದೇಶಕ್ಕಾಗಿ ತುಡಿಯುವ ಮನೋಸ್ಥಿತಿ ಬೆಳೆಸಿಕೊಳ್ಳಬೇಕು. ದೇಶದ ಮೇಲೆ ಆಕ್ರಮಣ ಮಾಡುವರಿಗೆ ತಕ್ಕ ಶಾಸ್ತಿ ಮಾಡದೆ ಬಿಡಕೂಡದು ಎಂದು ಅನೇಕ ಉದಾಹರಣೆಗಳ ಮೂಲಕ ಗಮನ ಸೆಳೆದರು. ಮೈಸೂರು ಮಹಾರಾಜರ ಸ್ಕೌಟ್ಸ್ ಮತ್ತು ಗೈಡ್ಸ್ ಪ್ರೀತಿ, ಆದರ್ಶಗಳನ್ನು ನೆನಪಿಸಿ ಮಕ್ಕಳಿಗೆ ಅವರು ಆದರ್ಶವಾಗಲಿ ಎಂದರು.

ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ರಾಷ್ಟ್ರೀಯ ಮುಖ್ಯ ಆಯುಕ್ತ ಬಿ.ಐ.ನಾಗರಾಲೆ ಮಾತನಾಡಿ, ಶತಮಾನದ ಇತಿಹಾಸ ಹೊಂದಿರುವ ಈ ಸಂಘಟನೆ ವಿಶ್ವದ 180 ದೇಶಗಳ 4.5 ಕೋಟಿ ಸದಸ್ಯರನ್ನೊಳಗೊಂಡಿದೆ. ಭಾರತದಲ್ಲಿ 55 ಲಕ್ಷ ಸ್ಕೌಟ್ಸ್ ಮತ್ತು ಗೈಡ್ಸ್‌ಗಳಿದ್ದಾರೆ. ಇದೊಂದು ಅಂತಾರಾಷ್ಟ್ರೀಯ ರಾಜಕೀಯೇತರ, ಧರ್ಮಾತೀತ ಸಂಘಟನೆ ಎಂದರು.

ಮುಖ್ಯವಾಗಿ ಸ್ವಚ್ಛತಾ ಕಾರ್ಯಕ್ರಮಗಳು, ಸಾಹಸ ಕಾರ್ಯಕ್ರಮಗಳು, ಪರಿಸರದ ಕುರಿತ ತಿಳಿವಳಿಕೆ, ಸಹಭೋಜನ, ಸಹಜೀವನ ಕ್ರಮಗಳ ಪರಿಚಯ ಇತ್ಯಾದಿ ವಿಚಾರಗಳಿಗೆ ಶಿಬಿರದಲ್ಲಿ ಆದ್ಯತೆ ನೀಡಲಾಗಿದೆ. 4500ಕ್ಕೂ ಹೆಚ್ಚು ಮಕ್ಕಳ ಭದ್ರತೆಗೆ ವಿಶೇಷ ಆಸಕ್ತಿ ವಹಿಸಲಾಗಿದೆ ಎಂದು ತಿಳಿಸಿದರು.

ನೆಲ-ಜಲ ರಕ್ಷಣೆ ನಮ್ಮ ಹೊಣೆ ಈ ಶಿಬಿರದ ಮುಖ್ಯ ವಿಚಾರ. ಪ್ರತಿ ಜಿಲ್ಲೆಗೂ ಪ್ರತ್ಯೇಕ ವ್ಯವಸ್ಥೆ ಮಾಡಿದ್ದು, ಜಿಲ್ಲೆಗೊಂದರಂತೆ ಅಡುಗೆ ಮನೆ, ಪ್ರತ್ಯೇಕ ಟೆಂಟ್‌ಗಳು ಸಿದ್ಧಗೊಂಡಿವೆ. ಇಲ್ಲಿ ಶಿಸ್ತಿನ ಪ್ರಾಯೋಗಿಕ ಪಾಠ ವಿದ್ಯಾರ್ಥಿಗಳಿಗೆ ಸಿಗಲಿದೆ. ಶಿಬಿರದಲ್ಲಿ ರಾಜ್ಯದ 30 ಜಿಲ್ಲೆಗಳ ಬರೋಬ್ಬರಿ 4500 ವಿದ್ಯಾರ್ಥಿಗಳು ಪಾಲ್ಗೊಂಡಿದ್ದಾರೆ. ಮಹತ್ವದ ಈ ಶಿಬಿರದಲ್ಲಿ ಅನೇಕ ಚಟುವಟಿಕೆಗಳ ಮೂಲಕ ವಿದ್ಯಾರ್ಥಿಗಳ ಮಾನಸಿಕ ಮತ್ತು ದೈಹಿಕ ಬೆಳವಣಿಗೆಗೆ ಮಾರ್ಗದರ್ಶನ ಮಾಡಲಾಗುತ್ತಿದೆ ಎಂದರು.

ಇಂಧನ ಸಚಿವ ಡಿ.ಕೆ.ಶಿವಕುಮಾರ್, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ ಸಚಿವ ಯು.ಟಿ.ಖಾದರ್, ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ರಾಜ್ಯ ಮುಖ್ಯ ಆಯುಕ್ತ ಪಿ.ಜಿ.ಆರ್.ಸಿಂಧ್ಯ ಮಾತನಾಡಿದರು.

ಶಾಸಕ ಟಿ.ವೆಂಕಟರಮಣಯ್ಯ, ಬೆಂ.ಗ್ರಾ.ಜಿಲ್ಲಾಧಿಕಾರಿ ಸಲ್ಮಾ ಕೆ.ಫಾಹಿಮಾ, ಅಂಚೆ ಇಲಾಖೆಯ ಮುಖ್ಯಾಧಿಕಾರಿ ಎಂ.ಎಸ್. ರಾಮಾನುಜನ್, ಸ್ಕೌಟ್ಸ್ ಮತ್ತು ಗೈಡ್ಸ್ ರಾಜ್ಯ ಕಾರ್ಯದರ್ಶಿ ಸಿದ್ದಯ್ಯ, ರಾಜ್ಯ ಆಯುಕ್ತ ಎಂ.ಎ.ಖಾಲಿದ್, ಗೀತಾ ನಟರಾಜ್, ಕೋಶಾಧಿಕಾರಿ ಪ್ರಭುದೇವ ಚಿಗಟೇರಿ, ಜಂಟಿ ಕಾರ್ಯದರ್ಶಿ ಚಿನ್ನಸ್ವಾಮಿ ರೆಡ್ಡಿ, ಎಸ್.ಕೆ.ಪ್ರಭಾ, ಉಪವಿಭಾಗಾಧಿಕಾರಿ ಮಂಜುನಾಥ್ ಮತ್ತಿತರರು ಪಾಲ್ಗೊಂಡಿದ್ದರು.









ಕನ್ನಡಪ್ರಭ

# ದೇಶದ ಏಕತೆ, ಸಮಗ್ರತೆಗೆ ಆದ್ಯತೆ ಅಗತ್ಯ

## ಸ್ಕೌಟ್ಸ್ ಮತ್ತು ಗೈಡ್ಸ್ ಜಾಂಬೋರೇಟ್‌ಗೆ ಚಾಲನೆ ನೀಡಿದ ರಾಜ್ಯಪಾಲ ವಜೂಭಾಯಿ ವಾಲಾ

ದೊಡ್ಡಬಳ್ಳಾಪುರ: ಸ್ಕೌಟ್ಸ್ ಮತ್ತು ಗೈಡ್ಸ್‌ಗಳಾಗಿ ರೂಪಿಸುವ ಮೂಲಕ ದೇಶದ ಸಮಗ್ರತೆ ಮತ್ತು ಏಕತೆಯನ್ನು ಪ್ರಚುರಪಡಿಸಿ ಸಾರ್ವಜನಿಕ ಸೇವೆಗೆ ಮುಂದಾಗಬೇಕು ಎಂದು ರಾಜ್ಯಪಾಲ ವಜೂಭಾಯಿ ವಾಲಾ ಕರೆ ನೀಡಿದರು.

ಇಲ್ಲಿನ ಬೆಸೆಂಟ್ ಪಾರ್ಕ್‌ನಲ್ಲಿ ಭಾನುವಾರ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಕರ್ನಾಟಕ, ಬೆಂಗಳೂರು ಗ್ರಾಮಾಂತರ ಜಿಲ್ಲಾಡಳಿತ ಮತ್ತು ಸಾರ್ವಜನಿಕ ಶಿಕ್ಷಣ ಇಲಾಖೆ ನೇತೃತ್ವದಲ್ಲಿ ಆರಂಭವಾದ 27ನೇ ಕರ್ನಾಟಕ ರಾಜ್ಯ ಸ್ಕೌಟ್ಸ್ ಮತ್ತು ಗೈಡ್ಸ್ ಜಾಂಬೋರೇಟ್ ಶಿಬಿರಕ್ಕೆ ಚಾಲನೆ ನೀಡಿ ಅವರು ಮಾತನಾಡಿದರು.

ದೇಶದ ಅಖಂಡ ಜನಸಂಖ್ಯೆ ಪ್ರಬಲ ರಾಷ್ಟ್ರೀಯ ವಿಚಾರಧಾರೆಯನ್ನು ಹೊಂದಿ ಮುಂದುವರೆಯಬೇಕು. ಸರ್ಕಾರದಲ್ಲಿರುವ ಜನ ಆದಷ್ಟೂ ಸರ್ಕಾರಿ ಸವಲತ್ತುಗಳ ದುಂದು ಬಳಕೆಗೆ ಕಡಿವಾಣ ಹಾಕಬೇಕು. ಇದು ಟೀಕೆಯಲ್ಲ, ಸಣ್ಣ ಸಲಹೆಯಷ್ಟೇ ಎಂದ ಅವರು, ಜನಸೇವಕರು ಜನರ ಹಣವನ್ನು ಹೊಣೆಯಾಧಾರಿತವಾಗಿ ಬಳಸಬೇಕು. ನಮ್ಮಲ್ಲಿನ ಸೇವಾ ಭಾವನೆ ರಾಷ್ಟ್ರಶಕ್ತಿಯಾಗಿ ಬೆಳೆಯಬೇಕು ಎಂದರು.

ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ರಾಷ್ಟ್ರೀಯ ಮುಖ್ಯ ಆಯುಕ್ತ ಬಿ.ಐ.ನಾಗರಾಲೆ ಮಾತನಾಡಿ, ಶತಮಾನದ ಇತಿಹಾಸ ಹೊಂದಿರುವ ಈ ಸಂಘಟನೆ ವಿಶ್ವದ 180 ದೇಶಗಳ 4.5 ಕೋಟಿ ಸದಸ್ಯರನ್ನೊಳಗೊಂಡಿದೆ.

ಭಾರತದಲ್ಲಿ 55 ಲಕ್ಷ ಸ್ಕೌಟ್ಸ್ ಮತ್ತು ಗೈಡ್ಸ್‌ಗಳಿದ್ದಾರೆ. ಇದೊಂದು ಅಂತರರಾಷ್ಟ್ರೀಯ

> ದೇಶದ ಅಖಂಡ ಜನಸಂಖ್ಯೆ ಪ್ರಬಲ ರಾಷ್ಟ್ರೀಯ ವಿಚಾರಧಾರೆಯನ್ನು ಹೊಂದಿ ಮುಂದುವರೆಯಬೇಕು. ಸರ್ಕಾರದಲ್ಲಿರುವ ಜನ ಆದಷ್ಟೂ ಸರ್ಕಾರಿ ಸವಲತ್ತುಗಳ ದುಂದು ಬಳಕೆಗೆ ಕಡಿವಾಣ ಹಾಕಬೇಕು. ಇದು ಟೀಕೆಯಲ್ಲ, ಸಣ್ಣ ಸಲಹೆಯಷ್ಟೇ ಎಂದ ಅವರು, ಜನಸೇವಕರು ಜನರ ಹಣವನ್ನು ಹೊಣೆಯಾಧಾರಿತವಾಗಿ ಬಳಸಬೇಕು. ನಮ್ಮಲ್ಲಿನ ಭಾವನೆ ರಾಷ್ಟ್ರಶಕ್ತಿಯಾಗಿ ಬೆಳೆಯಬೇಕು.

ರಾಜಕೀಯೇತರ, ಧರ್ಮಾತೀತ ಸಂಘಟನೆ. ವಿಶ್ವಭ್ರಾತೃತ್ವ, ವ್ಯಕ್ತಿತ್ವ ನಿರ್ಮಾಣ, ಜಾತ್ಯತೀತತೆ ಮತ್ತು ಸಾಧನೆಯ ಪ್ರಚೋದನೆ ಒಳಗೊಂಡಿದೆ ಎಂದರು.

ಕಾರ್ಯಕ್ರಮದಲ್ಲಿ ಇಂಧನ ಸಚಿವ ಡಿ.ಕೆ. ಶಿವಕುಮಾರ್, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ ಸಚಿವ ಯು.ಟಿ.ಖಾದರ್, ಭಾರತ್ ಸ್ಕೌಟ್ ಮತ್ತು ಗೈಡ್ಸ್ ರಾಜ್ಯ ಮುಖ್ಯ ಆಯುಕ್ತ ಪಿ.ಜಿ.ಆರ್.ಸಿಂಧ್ಯ ಮಾತನಾಡಿದರು. ಸ್ಥಳೀಯ ಶಾಸಕ ಟಿ.ವೆಂಕಟರಮಣಯ್ಯ ಅಧ್ಯಕ್ಷತೆ ವಹಿಸಿದ್ದರು.

ಬೆಂ.ಗ್ರಾ.ಜಿಲ್ಲಾಧಿಕಾರಿ ಸಲ್ಮಾ ಕೆ.ಫಾಹಿಮ,



ಕೊಂಡಜ್ಜಿ ಬಸಪ್ಪ ಸ್ಮರಣಾರ್ಥ ಅಂಚೆ ಲಕೋಟೆಯನ್ನು ರಾಜ್ಯಪಾಲರು ಬಿಡುಗಡೆ ಮಾಡಿದರು.

ಮುಖ್ಯ ಅಂಚೆ ಇಲಾಖೆಯ ಎಂ.ಎಸ್. ರಾಮಾನುಜನ್, ಸ್ಕೌಟ್ಸ್ ಮತ್ತು ಗೈಡ್ ರಾಜ್ಯ ಕಾರ್ಯದರ್ಶಿ ಸಿದ್ದಯ್ಯ, ರಾಜ್ಯ ಆಯುಕ್ತ ಎಂ.ಎ.ಖಾಲಿದ್, ಗೀತಾ ನಟರಾಜ್, ಕೋಶಾಧಿಕಾರಿ ಪ್ರಭುದೇವ ಚಿಗಟೇರಿ, ಜಂಟಿ ಕಾರ್ಯದರ್ಶಿ ಚೆನ್ನ ಸ್ವಾಮಿ ರೆಡ್ಡಿ, ಎಸ್.ಕೆ.ಪ್ರಭಾ, ಉಪವಿಭಾಗಾಧಿಕಾರಿ ಮಂಜುನಾಥ್ ಮತ್ತಿತರರು ಪಾಲ್ಗೊಂಡಿದ್ದರು.

**ಅಂಚೆ ಲಕೋಟೆ ಬಿಡುಗಡೆ:** ಇದೇ ಸಂದರ್ಭದಲ್ಲಿ ರಾಜ್ಯದಲ್ಲಿ ಸ್ಕೌಟ್ ಮತ್ತು ಗೈಡ್ಸ್‌ನ ಪ್ರವರ್ತಕರೆನಿಸಿರುವ ದಿ.ಕೊಂಡಜ್ಜಿ ಬಸಪ್ಪ ಜನ್ಮಶತಮಾನೋತ್ಸವ ಸ್ಮರಣಾರ್ಥ ಅಂಚೆ ಇಲಾಖೆ ಹೊರ ತಂದಿರುವ ವಿಶೇಷ ಅಂಚೆ ಲಕೋಟೆಯನ್ನು ರಾಜ್ಯಪಾಲರು ಲೋಕಾರ್ಪಣೆ ಮಾಡಿದರು.

**4500 ವಿದ್ಯಾರ್ಥಿಗಳು ಭಾಗಿ:** ದೊಡ್ಡಬಳ್ಳಾಪುರದಲ್ಲಿ ಆರಂಭವಾಗಿರುವ 27ನೇ ಕರ್ನಾಟಕ ರಾಜ್ಯ ಸ್ಕೌಟ್ಸ್ ಮತ್ತು ಗೈಡ್ಸ್ ಜಾಂಬೋರೇಟ್ ಶಿಬಿರದಲ್ಲಿ ರಾಜ್ಯದ 33 ಶೈಕ್ಷಣಿಕ ಜಿಲ್ಲೆಗಳ ಬರೋಬ್ಬರಿ 4500 ವಿದ್ಯಾರ್ಥಿಗಳು ಪಾಲ್ಗೊಂಡಿದ್ದಾರೆ. ರಾಜ್ಯಪಾಲರು ಮಕ್ಕಳಿಗೆ ದೇಶ ಭಕ್ತಿಯ ಕುರಿತು ವಿವರಿಸಿದರು.

ಶಿಬಿರದ ಸಮಗ್ರ ಉಸ್ತುವಾರಿ ನವದೆಹಲಿಯ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ರಾಷ್ಟ್ರೀಯ ಮುಖ್ಯ ಆಯುಕ್ತ ಬಿ.ಐ.ನಾಗರಾಲೆ ಮತ್ತು ರಾಜ್ಯ ಮುಖ್ಯ ಆಯುಕ್ತ ಪಿ.ಜಿ.ಆರ್.ಸಿಂಧ್ಯ ನೇತೃತ್ವದಲ್ಲಿ ನಡೆದಿದೆ. ಶಿಬಿರದ ಉದ್ಘಾಟನಾ ಕಾರ್ಯಕ್ರಮದಲ್ಲಿ ಮಕ್ಕಳಿಂದ





ಜಯ್ ಹೋ ನೃತ್ಯ ರೂಪಕ, ಸ್ಕೌಟ್ಸ್ ಮತ್ತು ಗೈಡ್ ಗೀತೆ ಗಾಯನ ನಡೆದವು.

ಉದಯವಾಣಿ
ಸೋಮವಾರ | ಜನವರಿ | 19 | 2015

ಜಾಂ ಬೋ ರೇ ಟ್

# ‘ದೇಶದ ಪ್ರಗತಿಗೆ ಒಗ್ಗಟ್ಟು ಮುಖ್ಯ’

## ■ ಐಕ್ಯತೆ, ಸಮಗ್ರತೆಗೆ ಸ್ಕೌಟ್ಸ್, ಗೈಡ್ಸ್ ಪಾತ್ರ ಮಹತ್ವದ್ದು: ರಾಜ್ಯಪಾಲ ವಜುಭಾಯಿ

ದೊಡ್ಡಬಳ್ಳಾಪುರದಲ್ಲಿ ಭಾರತ್ ಸ್ಕೌಟ್ಸ್ ಅಂಡ್ ಗೈಡ್ಸ್ ವತಿಯಿಂದ ನಡೆಯಲಿರುವ ಕರ್ನಾಟಕದ 27ನೇ ಜಾಂಬೋರೇಟ್ ಕಾರ್ಯಕ್ರಮಕ್ಕೆ ಬಲೂನುಗಳನ್ನು ಹಾರಿಬಿಡುವ ಮೂಲಕ ರಾಜ್ಯಪಾಲ ವಾಜುಭಾಯಿ ಆರ್ ವಾಲಾ ಚಾಲನೆ ನೀಡಿದರು.

ವಿಶೇಷ ಅಂಚೆ ಲಕೋಟೆಯನ್ನು ರಾಜ್ಯಪಾಲ ವಾಜುಭಾಯಿ ವಾಲಾ ಬಿಡುಗಡೆ ಮಾಡಿದರು.

27ನೇ ಜಾಂಬೋರೇಟ್ ಕಾರ್ಯಕ್ರಮದಲ್ಲಿ ಸಾಹಸ ಚಟುವಟಿಕೆಯಲ್ಲಿ ನಿರತರಾಗಿರುವ ಶಿಬಿರಾರ್ಥಿಗಳು.

ದೊಡ್ಡಬಳ್ಳಾಪುರ: ಕೇವಲ ಹಣದಿಂದ ಸಮಾಜಕ್ಕೆ ಉಪಯೋಗವಾಗುವುದಿಲ್ಲ. ದೇಶದ ಪ್ರಗತಿಗೆ ರಾಷ್ಟ್ರ ಪ್ರೇಮ, ಒಗ್ಗಟ್ಟು ಮುಖ್ಯವಾಗಿದೆ ಎಂದು ರಾಜ್ಯಪಾಲ ವಜುಭಾಯಿ ಆರ್. ವಾಲಾ ಹೇಳಿದರು.

ನಗರದ ಅನಿಬೆಸೆಂಟ್ ಪಾರ್ಕ್‌ನಲ್ಲಿ ಭಾರತ್ ಸ್ಕೌಟ್ ಅಂಡ್ ಗೈಡ್ಸ್, ಜಿಲ್ಲಾಡಳಿತ, ಸಾರ್ವಜನಿಕ ಶಿಕ್ಷಣ ಇಲಾಖೆ ಹಮ್ಮಿಕೊಂಡಿದ್ದ 7 ದಿನಗಳ ಕಾಲ ನಡೆಯಲಿರುವ ಕೊಂಡಜ್ಜಿ ಬಸಪ್ಪ ಜನ್ಮ ಶತಮಾನೋತ್ಸವ ಸ್ಮರಣಾರ್ಥ ಕರ್ನಾಟಕದ 27ನೇ ಜಾಂಬೋರೇಟ್ ಕಾರ್ಯಕ್ರಮಕ್ಕೆ ಬಲೂನುಗಳನ್ನು ಹಾರಿಬಿಡುವ ಮೂಲಕ ಚಾಲನೆ ನೀಡಿ ಮಾತನಾಡಿದರು.

ವಿಶಾಲ ಭಾರತದ ಐಕ್ಯತೆ, ಸಮಗ್ರತೆಯನ್ನು ಕಾಪಾಡಿಕೊಂಡು ದೇಶದ ಉತ್ತಮ ಭವಿಷ್ಯ ರೂಪಿಸುವಲ್ಲಿ ಸ್ಕೌಟ್ಸ್ ಮತ್ತು ಗೈಡ್ಸ್ ನಂತಹ ಚಳವಳಿಗಳ ಪಾತ್ರ ಮಹತ್ವದ್ದಾಗಿದೆ. ರಾಜ್ಯ ಮತ್ತು ಕೇಂದ್ರ ಸರ್ಕಾರ ಸ್ಕೌಟ್ಸ್ ಮತ್ತು ಗೈಡ್ಸ್‌ನಂತಹ ಚಳವಳಿಗಳಿಗೆ ಹೆಚ್ಚಿನ ಉತ್ತೇಜನ ನೀಡಬೇಕಿದೆ ಎಂದರು.

ನಾವು ಜನ ಸಂಖ್ಯೆ ಹೆಚ್ಚಿದೆ ಎನ್ನುವುದು ಮುಖ್ಯ ಅಲ್ಲ. ಜನ ಸಂಖ್ಯೆ, ವಿಸ್ತೀರ್ಣ ಎಲ್ಲದರಲ್ಲೂ ಕಡಿಮೆ ಇರುವ ಇಸ್ರೇಲ್ ದೇಶ ಹಣ್ಣು, ಹೂವು ತರಕಾರಿ ಉತ್ಪಾದನೆಯಲ್ಲಿ ವಿಶ್ವದಲ್ಲೇ ಹೆಸರು ಮಾಡಿದೆ. ಅದು ನಮಗೆ ಮಾದರಿಯಾಗಬೇಕಿದೆ. ವಿದ್ಯಾರ್ಥಿಗಳು ಎಂತಹ ಸ್ಪರ್ಧೆ ಸಂದರ್ಭದಲ್ಲೂ ಶ್ರಮದಿಂದ ಪರಿಗಣಿಸುವುದನ್ನು ಕಲಿಯಬೇಕು. ಧ್ಯೇಯ ಇಲ್ಲದ ಜೀವನ ನಿರರ್ಥಕ. ಮಹಾತ್ಮಗಾಂಧಿ, ಸರ್ದಾರ್ ವಲ್ಲಭ ಭಾಯಿಪಟೇಲ್ ತಮ್ಮ ಇಡೀ ಜೀವನವನ್ನೇ ದೇಶದ ಸ್ವಾತಂತ್ರ್ಯಕ್ಕಾಗಿ ಮುಡಿಪಾಗಿಟ್ಟು ದುಡಿದವರು ಎಂದು ಸ್ಮರಿಸಿದರು. ಇಂಧನ ಸಚಿವ ಡಿ.ಕೆ.ಶಿವಕುಮಾರ್ ಮಾತನಾಡಿ, ವಿಶ್ವದ ಅತ್ಯಂತ ಹಳೆ ಸಂಘಟನೆಯಾಗಿರುವ ಸ್ಕೌಟ್ ಮತ್ತು ಗೈಡ್ಸ್ ಶಾಂತಿ, ಸಮಗ್ರತೆ, ಐಕ್ಯತೆಯನ್ನು ವಿದ್ಯಾರ್ಥಿಗಳಲ್ಲಿ ಬೆಳೆಸುತ್ತದೆ. [illegible] ತಮ್ಮ ಹೊಣೆ ಎನ್ನುವ ಉದ್ದೇಶದಿಂದ ನಡೆಯುತ್ತಿರುವ ಜಾಂಬೋರೇಟ್ ಸಾರ್ಥಕವಾಗಬೇಕು ಎಂದರು.

ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ರಾಷ್ಟ್ರೀಯ ಆಯುಕ್ತ ಪಿ.ಜಿ.ನಾಗರಾಜ್ ಮಾತನಾಡಿ, ಸ್ಕೌಟ್ಸ್ ಮತ್ತು ಗೈಡ್ಸ್ ಚಳವಳಿಯಲ್ಲಿ ಕರ್ನಾಟಕ ಮುಂಚೂಣಿಯಲ್ಲಿದೆ ಎಂದು ಶ್ಲಾಘಿಸಿದರು. ಇದೇ ಸಂದರ್ಭದಲ್ಲಿ ಕೊಂಡಜ್ಜಿ ಬಸಪ್ಪ ಜನ್ಮ ಶತಮಾನೋತ್ಸವ ಸ್ಮರಣಾರ್ಥ ವಿಶೇಷ ಅಂಚೆ ಲಕೋಟೆಯನ್ನು ಬಿಡುಗಡೆ ಮಾಡಲಾಯಿತು. ಶಾಸಕ ಟಿ.ವೆಂಕಟರಮಣಯ್ಯ ಸಮಾರಂಭದ ಅಧ್ಯಕ್ಷತೆ ವಹಿಸಿದ್ದರು. ಆರೋಗ್ಯ ಸಚಿವ ಯು.ಟಿ.ಖಾದರ್, ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ರಾಜ್ಯ ಮುಖ್ಯ ಆಯುಕ್ತ ಪಿ.ಜಿ.ಆರ್.ಸಿಂಧ್ಯ, ರಾಜ್ಯ ಕಾರ್ಯದರ್ಶಿ ಸಿದ್ದಯ್ಯ, ಭಾರತ್ ಸ್ಕೌಟ್ಸ್ ಅಂಡ್ ಗೈಡ್ಸ್‌ನ ಕೊಂಡಜ್ಜಿ ಶಣ್ಮುಗಪ್ಪ, ಪೋಸ್ಟ್ ಚೀಫ್ ಜನರಲ್ ಮ್ಯಾನೇಜರ್ ರಾಮಾನುಜಂ, ಜಿಲ್ಲಾಧಿಕಾರಿ ಸಲ್ಮಾ ಕೆ.ಫಹೀಂ ಇತರರಿದ್ದರು.

# ಜಾಂಬೋರೇಟ್‌ನಲ್ಲಿ 4500 ವಿದ್ಯಾರ್ಥಿಗಳು ಭಾಗಿ

ದೊಡ್ಡಬಳ್ಳಾಪುರ: ನಗರದ ಹೊರವಲಯದ ಅನಿಬೆಸೆಂಟ್ ಪಾರ್ಕ್‌ನಲ್ಲಿ ಭಾರತ ಸ್ಕೌಟ್ಸ್ ಅಂಡ್ ಗೈಡ್ಸ್‌ನ ಕರ್ನಾಟಕದ 27ನೇ ಜಾಂಬೋರೇಟ್ ಕಾರ್ಯಕ್ರಮ ಸ್ಕೌಟ್ಸ್ ಅಂಡ್ ಗೈಡ್ಸ್‌ನ ಇತಿಹಾಸದಲ್ಲಿ ಒಂದು ಮೈಲಿಗಲ್ಲಾಗಲಿದೆ. ಅನಿಬೆಸೆಂಟ್ ಪಾರ್ಕ್‌ನಲ್ಲಿ ದ್ವಿತೀಯ ಬಾರಿ ನಡೆಯುತ್ತಿರುವ ರಾಜ್ಯಮಟ್ಟದ ಜಾಂಬೋರೇಟ್‌ನಲ್ಲಿ ರಾಜ್ಯದ 33 ಜಿಲ್ಲೆಗಳಿಂದ ಹಾಗೂ ದಕ್ಷಿಣ ಭಾರತದ ಹಲವಾರು ರಾಜ್ಯಗಳಿಂದ 4,500 ವಿದ್ಯಾರ್ಥಿಗಳು ಆಗಮಿಸಲಿದ್ದು, 7 ದಿನಗಳ ಕಾಲ ಅವರ ಪ್ರತಿಭೆಗಳನ್ನು ಅನಾವರಣಗೊಳಿಸಲಿದ್ದಾರೆ. ಇದರಲ್ಲಿ ವಿದ್ಯಾರ್ಥಿಗಳಿಗೆ ಬದುಕುವ ವಿಧಾನ, ಸರ್ವಧರ್ಮ ಪ್ರಾರ್ಥನೆ, ದೇಹ ಮತ್ತು ಪರಿಸರ ಸ್ವಚ್ಛತೆ, ಭಾವೈಕ್ಯತೆ ಸೇರಿದಂತೆ ಹಲವಾರು ವಿಷಯಗಳ ಬಗ್ಗೆ ತರಬೇತಿ ನೀಡಲಾಗುತ್ತದೆ.

ವಿದ್ಯಾರ್ಥಿಗಳಿಂದ ಜಿಲ್ಲಾ ದರ್ಶನ, ಸಾಹಸಮಯ ಪ್ರದರ್ಶನಗಳು, ಹಲವು ಸಾಂಸ್ಕೃತಿಕ, ರಸಪ್ರಶ್ನೆ, ಯುವವೇದಿಕೆ, ಕಾರ್ಯಕ್ರಮಗಳು ನಡೆಯಲಿವೆ.

ಸಹಸ್ರಾರು ವಿದ್ಯಾರ್ಥಿಗಳನ್ನು ಸ್ಕೌಟ್ಸ್ ಅಂಡ್ ಗೈಡ್ಸ್‌ನ ಸ್ವಯಂಸೇವಕರನ್ನು 7 ದಿನಗಳ ಕಾಲ ಒಂದೆಡೆ ಸೇರಿಸಿ ಕಾರ್ಯಕ್ರಮವನ್ನು ಆಯೋಜಿಸುವ ಸವಾಲನ್ನು ಸ್ಕೌಟ್ಸ್ ಅಂಡ್ ಗೈಡ್ಸ್‌ನ ರಾಜ್ಯ ಘಟಕ ಬೆಂಗಳೂರು ಗ್ರಾಮಾಂತರ ಜಿಲ್ಲಾಡಳಿತ, ಸಾರ್ವಜನಿಕ ಶಿಕ್ಷಣ ಇಲಾಖೆ ಸಮರ್ಪಕವಾಗಿ ನಿರ್ವಹಿಸುವಲ್ಲಿ ಶ್ರಮಿಸುತ್ತಿವೆ. 33 ಜಿಲ್ಲೆಗಳಿಂದ ಆಗಮಿಸಿರುವ ಶಿಬಿರಾರ್ಥಿಗಳಿಗೆ ಹಾಗೂ ಸ್ವಯಂಸೇವಕರಿಗೆ ಉಳಿದುಕೊಳ್ಳಲು ಸೂಕ್ತ ವ್ಯವಸ್ಥೆ ಕಲ್ಪಿಸಲಾಗಿದ್ದು, ನೂರಾರು ಬಿಡಾರಗಳನ್ನು ಹಾಕಲಾಗಿದೆ.

ಪ್ರತಿ ಜಿಲ್ಲೆಗೂ ಪ್ರತ್ಯೇಕವಾಗಿ ಅಡುಗೆ ಮಾಡಲು ವ್ಯವಸ್ಥೆ ಮಾಡಲಾಗಿದೆ. ಅಡುಗೆ ಘಟಕಗಳಲ್ಲಿ ಜಿಲ್ಲೆ ಸ್ಕೌಟ್ಸ್ ಅಂಡ್ ಗೈಡ್ಸ್‌ನ ಸಾಧನೆ, ಜಿಲ್ಲೆಗಳ ಪ್ರೇಕ್ಷಣೀಯ ಸ್ಥಳಗಳ, ಜನಪ್ರಿಯ ವ್ಯಕ್ತಿಗಳ ಪರಿಚಯಗಳನ್ನು ಹಾಕಲಾಗಿದೆ. ಪೊಲೀಸ್ ಇಲಾಖೆ, ಅಗ್ನಿ ಶಾಮಕ ದಳ, ಆಸ್ಪತ್ರೆ, ಅಂಚೆಕಚೇರಿ, ಬೆಸ್ಕಾಂ ಇಲಾಖೆ ಮೊದಲಾಗಿ ವಿವಿಧ ಇಲಾಖೆಯ ಅಧಿಕಾರಿಗಳು ಸ್ಥಳದಲ್ಲಿಯೇ ಮೊಕ್ಕಾಂ ಹೂಡಿದ್ದು, ಶಿಬಿರಾರ್ಥಿಗಳಿಗೆ ಸೂಕ್ತ ವ್ಯವಸ್ಥೆಗಳನ್ನು ಮಾಡುತ್ತಿದ್ದಾರೆ.

ದೊಡ್ಡಬಳ್ಳಾಪುರದಲ್ಲಿ ಭಾರತ್ ಸ್ಕೌಟ್ಸ್ ಅಂಡ್ ಗೈಡ್ಸ್ ವತಿಯಿಂದ ನಡೆಯಲಿರುವ ಕರ್ನಾಟಕದ 27ನೇ ಜಾಂಬೋರೇಟ್ ಕಾರ್ಯಕ್ರಮದಲ್ಲಿ ವ್ಯವಸ್ಥೆ ಮಾಡಿದ್ದ ಜಿಲ್ಲಾವಾರು ಅಡುಗೆ ಕೋಣೆಗಳಲ್ಲಿ ಜಿಲ್ಲಾ ವೈಶಿಷ್ಟ್ಯಗಳನ್ನು ಬಿಂಬಿಸುವ ಭಿತ್ತಿಚಿತ್ರಗಳು ಗಮನ ಸೆಳೆದವು.

ಕನ್ನಡಪ್ರಭ

# ಸ್ಕೌಟ್ಸ್-ಗೈಡ್ಸ್ ಕಡ್ಡಾಯಕ್ಕೆ ಸರ್ಕಾರ ಚಿಂತನೆ

ದೊಡ್ಡಬಳ್ಳಾಪುರ: ರಾಜ್ಯದ ಪ್ರಾಥಮಿಕ ಮತ್ತು ಪ್ರೌಢ ಶಾಲೆಗಳಲ್ಲಿ ಸ್ಕೌಟ್ಸ್ ಮತ್ತು ಗೈಡ್ಸ್ ಅನ್ನು ಕಡ್ಡಾಯಗೊಳಿಸುವ ಕುರಿತು ಶಿಕ್ಷಣ ಇಲಾಖೆಯೊಂದಿಗೆ ಗಂಭೀರವಾಗಿ ಚರ್ಚಿಸಿ ತೀರ್ಮಾನ ಕೈಗೊಳ್ಳಲಾಗುವುದು ಎಂದು ಮುಖ್ಯಮಂತ್ರಿ ಸಿದ್ದರಾಮಯ್ಯ ಹೇಳಿದರು.

ಇಲ್ಲಿನ ಬೆಸೆಂಟ್ ಪಾರ್ಕ್‌ನಲ್ಲಿ ಭಾರತ್ ಸ್ಕೌಟ್ ಮತ್ತು ಗೈಡ್ಸ್ ಕರ್ನಾಟಕ, ಬೆಂಗಳೂರು ಗ್ರಾಮಾಂತರ ಜಿಲ್ಲಾಡಳಿತ ಮತ್ತು ಸಾರ್ವಜನಿಕ ಶಿಕ್ಷಣ ಇಲಾಖೆ ನೇತೃತ್ವದಲ್ಲಿ ಗುರುವಾರ ಸಂಜೆ ನಡೆದ 27ನೇ ಕರ್ನಾಟಕ ರಾಜ್ಯ ಸ್ಕೌಟ್ ಮತ್ತು ಗೈಡ್ಸ್ ಜಾಂಬೋರೇಟ್ ಶಿಬಿರದ ಸಮಾರೋಪ ಸಮಾರಂಭದಲ್ಲಿ ಅವರು ಸಮಾರೋಪ ಭಾಷಣ ಮಾಡಿದರು. ಸ್ವಾತಂತ್ರ್ಯ ಸಂವಿಧಾನದ ಆಶಯದಂತೆ ಎಲ್ಲರಿಗೂ ಸಿಗಬೇಕು.

ಒಂದು ಓಟು ಹಾಕುವ ಸ್ವಾತಂತ್ರ್ಯ ಸಿಕ್ಕರೆ ಸಾಲದು. ಆರ್ಥಿಕ ಮತ್ತು ಸಾಮಾಜಿಕ ಅವಕಾಶಗಳು, ಸಾಮಾಜಿಕ ನ್ಯಾಯ ಒದಗಿಸುವ ಮೂಲಕ ಸಮಾನತೆಯ ಸಮಾಜ ಕಟ್ಟಬೇಕಾಗಿದೆ ಎಂದ ಅವರು, ಜಾತ್ಯತೀತ ರಾಷ್ಟ್ರ ನಿರ್ಮಾಣ ಎಲ್ಲರ ಕನಸಾಗಬೇಕು. ಅದಕ್ಕೆ ಪೂರಕ ಶಿಕ್ಷಣ, ಬಾಳ್ವೆಯ ಹಾದಿ ದೊರೆತಾಗ ಮಾತ್ರ ಮುನ್ನಡೆ ಸಾಧ್ಯ. ಪಠ್ಯ ಪುಸ್ತಕಗಳಿಂದ ಮಾತ್ರ ಇದು ಸಾಧ್ಯವಿಲ್ಲ. ಪಠ್ಯೇತರ ಸೃಜನಶೀಲ ಚಟುವಟಿಕೆಗಳೂ ಬೇಕಾಗುತ್ತವೆ ಎಂದರು.

ಮಕ್ಕಳೇ ಸಂಪತ್ತು. ಮಕ್ಕಳೇ ದೇಶದ ಸಂಪತ್ತು. ಮಕ್ಕಳನ್ನು ಈ ದೇಶಕ್ಕೆ ಹೊರೆಯಾಗದ ರೀತಿಯಲ್ಲಿ ಉತ್ತಮ ಚಾರಿತ್ರ್ಯ ಮತ್ತು ವ್ಯಕ್ತಿತ್ವವನ್ನು ನೀಡಿ ಬೆಳೆಸಬೇಕಾಗಿದೆ. ದೇಶವನ್ನು ಕಟ್ಟುವ, ಗೌರವ ಮತ್ತು ಘನತೆಯನ್ನು ಜಾಗತಿಕ ಮಟ್ಟದಲ್ಲಿ ಗುರ್ತಿಸುವ ರೀತಿಯಲ್ಲಿ ಚಿಂತಿಸಬೇಕು. ಜನರ ಜವಾಬ್ದಾರಿ ಈ ಹಂತದಲ್ಲಿ ಹೆಚ್ಚು ಎಂದ ಅವರು, ಶಾಲೆ-ಮನೆಪಾಠ-ಪರೀಕ್ಷೆ ಇಷ್ಟೇ ಶಿಕ್ಷಣವಲ್ಲ. ಈ ಮಿತಿಯೊಳಗೆ ಬೆಳೆವ ಮಕ್ಕಳು ಬದುಕಿನ ಕ್ಲಿಷ್ಟ ಸವಾಲುಗಳನ್ನು ಎದುರಿಸುವಲ್ಲಿ ಸೋಲುತ್ತಾರೆ. ಅಂಕ ಮತ್ತು ಪರೀಕ್ಷೆಗಿಂತ ವ್ಯಕ್ತಿತ್ವ ಮತ್ತು ಮಾನಸಿಕ ಬೆಳವಣಿಗೆ ಮುಖ್ಯವಾಗುತ್ತದೆ ಎಂದರು.



ದೊಡ್ಡಬಳ್ಳಾಪುರದ ಬೆಸೆಂಟ್ ಪಾರ್ಕ್‌ನಲ್ಲಿ ಭಾರತ್ ಸ್ಕೌಟ್ ಮತ್ತು ಗೈಡ್ಸ್ ಕರ್ನಾಟಕ ನೇತೃತ್ವದಲ್ಲಿ ನಡೆದ 27ನೇ ಕರ್ನಾಟಕ ರಾಜ್ಯ ಸ್ಕೌಟ್ ಮತ್ತು ಗೈಡ್ಸ್ ಜಾಂಬೋರೇಟ್ ಶಿಬಿರದ ಸಮಾರೋಪ ಸಮಾರಂಭದಲ್ಲಿ ಕೊಂಡಜ್ಜಿ ಬಸಪ್ಪ ಭವನವನ್ನು ಮುಖ್ಯಮಂತ್ರಿ ಸಿದ್ದರಾಮಯ್ಯ ಉದ್ಘಾಟಿಸಿದರು.

ಅವಿಸ್ಮರಣೀಯ: ಕರ್ನಾಟಕ ಮತ್ತು ದೇಶದಲ್ಲಿ ಸ್ಕೌಟ್ ಮತ್ತು ಗೈಡ್ಸ್ ಅನ್ನು ಸದೃಢವಾಗಿ ಕಟ್ಟಿದ ಕೊಂಡಜ್ಜಿ ಬಸಪ್ಪ ಮತ್ತು ಕೊಂಡಜ್ಜಿ ಕುಟುಂಬದ ಸೇವೆ ಅನನ್ಯ ಮತ್ತು ಅವಿಸ್ಮರಣೀಯ. ಇಂದು ರಾಜ್ಯದಲ್ಲಿ 3.5 ಲಕ್ಷ ಮಕ್ಕಳು ಈ ಚಳವಳಿಯ ಭಾಗವಾಗಿದ್ದಾರೆ. ಇದನ್ನು 10 ಲಕ್ಷಕ್ಕೆ ಕೊಂಡೊಯ್ಯುವ ನಿರ್ಧಾರ ಮಾಡಿರುವ ಸಂಸ್ಥೆ ಕೈಗೊಳ್ಳುವ ಎಲ್ಲ ಯೋಜನೆಗಳಿಗೆ ಸರ್ಕಾರ ಸಂಪೂರ್ಣ ಸಹಕಾರ ಮತ್ತು ನೆರವು ನೀಡಲಿದೆ ಎಂದರು.

ಭವನ ಉದ್ಘಾಟನೆ: ಇದೇ ಸಂದರ್ಭದಲ್ಲಿ ಅವರು, ಕೊಂಡಜ್ಜಿ ಬಸಪ್ಪ ಸ್ಮರಣಾರ್ಥ ಬೆಸೆಂಟ್‌ಪಾರ್ಕ್‌ನಲ್ಲಿ ನಿರ್ಮಿಸಲಾಗಿರುವ ಭವನ ಮತ್ತು ಮಹುಪಯೋಗಿ ಸಮುದಾಯ ಭವನಗಳನ್ನು ಉದ್ಘಾಟಿಸಿದರು. ಕಾರ್ಯಕ್ರಮದಲ್ಲಿ ಲೋಕೋಪಯೋಗಿ ಸಚಿವ ಡಾ.ಎಚ್.ಸಿ.ಮಹದೇವಪ್ಪ ಸ್ಮರಣ ಸಂಚಿಕೆ ಬಿಡುಗಡೆ ಮಾಡಿ ಮಾತನಾಡಿದರು.

ಮಾಜಿ ಕೇಂದ್ರ ಸಚಿವ ಎಂ..ವೀರಪ್ಪ ಮೊಯ್ಲಿ, ವಾರ್ತಾ ಸಚಿವ ಆರ್.ರೋಷನ್ ಬೇಗ್, ಜಿಲ್ಲಾ ಉಸ್ತುವಾರಿ ಸಚಿವ ಕೃಷ್ಣ ಬೈರೇಗೌಡ, ಉನ್ನತ ಶಿಕ್ಷಣ ಸಚಿವ ಆರ್.ವಿ.ದೇಶಪಾಂಡೆ, ಸ್ಥಳೀಯ ಶಾಸಕ ಟಿ. ವೆಂಕಟರಮಣಯ್ಯ, ಬಯಾಪ ಅಧ್ಯಕ್ಷ ಆರ್.ಜಿ.ವೆಂಕಟಾಚಲಯ್ಯ, ಮಾಜಿ ಸಚಿವೆ ರಾಣಿ ಸತೀಶ್, ಶಾಸಕಿ ವಿಮಲಾಗೌಡ, ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ರಾಜ್ಯ ಮುಖ್ಯ ಆಯುಕ್ತ ಪಿ.ಜಿ.ಆರ್.ಸಿಂಧ್ಯ , ಬೆಂ.ಗ್ರಾ. ಜಿಲ್ಲಾಧಿಕಾರಿ ಸಲ್ಮಾ ಕೆ.ಫಾಹಿಮ, ಸ್ಕೌಟ್ಸ್ ಮತ್ತು ಗೈಡ್ಸ್ ರಾಜ್ಯ ಕಾರ್ಯದರ್ಶಿ ಸಿದ್ದಯ್ಯ, ರಾಜ್ಯ ಆಯುಕ್ತ ಎಂ.ಎ.ಖಾಲಿದ್, ಗೀತಾ ನಟರಾಜ್, ಕೋಶಾಧಿಕಾರಿ ಪ್ರಭುದೇವ ಚಿಗಟೇರಿ, ಜಂಟಿ ಕಾರ್ಯದರ್ಶಿ ಚಿನ್ನ ಸ್ವಾಮಿ ರೆಡ್ಡಿ, ಎಸ್.ಕೆ.ಪ್ರಭಾ, ಉಪ ವಿಭಾಗಾಧಿಕಾರಿ ಮಂಜುನಾಥ್ ಮತ್ತಿತರರು ಪಾಲ್ಗೊಂಡಿದ್ದರು.

## ಸಮವಸ್ತ್ರ ಸರ್ಕಾರವೇ ನೀಡಲಿ

ದೊಡ್ಡಬಳ್ಳಾಪುರ: ರಾಜ್ಯದ ಪ್ರಾಥಮಿಕ ಮತ್ತು ಪ್ರೌಢ ಶಾಲೆಗಳಲ್ಲಿ ಸ್ಕೌಟ್ ಮತ್ತು ಗೈಡ್ಸ್ ಅನ್ನು ಕಡ್ಡಾಯಗೊಳಿಸುವುದರ ಜೊತೆಗೆ ಸರ್ಕಾರಿ ಶಾಲೆಗಳ ಮಕ್ಕಳಿಗೆ ಸ್ಕೌಟ್ಸ್ ಮತ್ತು ಗೈಡ್ ಸಮವಸ್ತ್ರವನ್ನು ಸರ್ಕಾರವೇ ನೀಡುವಂತಾಗಬೇಕು ಎಂದು ಭಾರತ್ ಸ್ಕೌಟ್ ಮತ್ತು ಗೈಡ್ಸ್‌ನ ರಾಜ್ಯ ಮುಖ್ಯ ಆಯುಕ್ತ ಪಿ.ಜಿ.ಆರ್.ಸಿಂಧ್ಯ ಮುಖ್ಯ ಮಂತ್ರಿ ಸಿದ್ದರಾಮಯ್ಯ ಅವರನ್ನು ಆಗ್ರಹಿಸಿದ್ದಾರೆ.

ಇಲ್ಲಿನ ಬೆಸೆಂಟ್ ಪಾರ್ಕ್‌ನಲ್ಲಿ ಗುರುವಾರ ಸಂಜೆ ನಡೆದ 27ನೇ ಕರ್ನಾಟಕ ರಾಜ್ಯ ಸ್ಕೌಟ್ಸ್ ಮತ್ತು ಗೈಡ್ಸ್ ಜಾಂಬೋರೇಟ್ ಶಿಬಿರದ ಸಮಾರೋಪ ಸಮಾರಂಭದಲ್ಲಿ ಅವರು ಮಾತನಾಡಿ ಬೇಡಿಕೆಗಳನ್ನು ಮುಂದಿಟ್ಟರು.

ರಾಜ್ಯದಲ್ಲಿ ಪ್ರಸ್ತುತ 3.5 ಲಕ್ಷ ಸ್ಕೌಟ್ ಮತ್ತು ಗೈಡ್‌ಗಳಿದ್ದಾರೆ. ಈ ಸಂಖ್ಯೆಯನ್ನು 10 ಲಕ್ಷಕ್ಕೇರಿಸುವ ಗುರಿ ಹೊಂದಲಾಗಿದೆ. ಶಿಕ್ಷಣ ಇಲಾಖೆ ಇದಕ್ಕೆ ಸಹಕರಿಸಬೇಕು. ಶಿಕ್ಷಕರಿಗೆ ಕೊಡುತ್ತಿರುವ ಹಾಲಿ ಮಾಸಿಕ ಗೌರವ ಧನ ಕೇವಲ ರು.75. ಇದನ್ನು ಕನಿಷ್ಠ 500ರು.ಗೆ ಏರಿಕೆ ಮಾಡಬೇಕು. ಸ್ಕೌಟ್ಸ್ ಮತ್ತು ಗೈಡ್ಸ್ ವಿದ್ಯಾರ್ಥಿಗಳಿಗೆ ರೈಲ್ವೇ ಸೇರಿದಂತೆ ಎಲ್ಲ ಬಗೆಯ ಉದ್ಯೋಗ ನೇಮಕಾತಿಗಳಲ್ಲಿ ಮೀಸಲಾತಿ ಇದ್ದು ರಾಜ್ಯ ಸರ್ಕಾರ ಮೀಸಲಾತಿ ಪ್ರಮಾಣವನ್ನು ಹೆಚ್ಚಳ ಮಾಡಬೇಕು. ರಾಜ್ಯದ ಕೊಂಡಜ್ಜಿ, ಧಾರವಾಡ, ದೊಡ್ಡಬಳ್ಳಾಪುರ, ಉಡುಪಿ ಮತ್ತಿತರ ಕಡೆಗಳಲ್ಲಿ ಇರುವ ಸ್ಕೌಟ್ ಮತ್ತು ಗೈಡ್ಸ್ ತರಬೇತಿ ಕೇಂದ್ರಗಳಿಗೆ ಮೂಲಸೌಕರ್ಯಗಳನ್ನು ಹೆಚ್ಚಿಸಲು ಹೆಚ್ಚಿನ ಅನುದಾನ ಬಿಡುಗಡೆ ಮಾಡಬೇಕು ಎಂದು ಒತ್ತಾಯಿಸಿದರು.

1 ಲಕ್ಷ ಸಸಿ ಯೋಜನೆ: ಕೊಂಡಜ್ಜಿ ಬಸಪ್ಪ ಅವರ ಜನ್ಮ ಶತಮಾನೋತ್ಸವ ಅಂಗವಾಗಿ ರಾಜ್ಯದ ವಿವಿಧ ಜಿಲ್ಲೆಗಳಲ್ಲಿ ಕನಿಷ್ಠ 1 ಲಕ್ಷ ಸಸಿಗಳನ್ನು ನೆಟ್ಟು ಬೆಳೆಸುವ ಯೋಜನೆಯನ್ನು ಸಂಸ್ಥೆ ಕೈಗೆತ್ತಿಕೊಂಡಿದೆ.

ಮುಖ್ಯ ಮಂತ್ರಿಗಳು ಸಹಕಾರ ನೀಡಿದರೆ 1986ರಲ್ಲಿ ಬೆಂಗಳೂರಿನಲ್ಲಿ ನಡೆದಿದ್ದ ರೀತಿಯಲ್ಲಿ ರಾಷ್ಟ್ರೀಯ ಜಾಂಬೋರೇಟ್ ಶಿಬಿರ ನಡೆಸಲಾಗುವುದು ಎಂದರು.





# ಕನ್ನಡಮ್ಮ ಕೊಂಡಜ್ಜಿ ಬಸಪ್ಪ

'ಕೊಂಡಜ್ಜಿ' ಎಂದೇ ಜನಪ್ರಿಯರಾಗಿದ್ದ ಶ್ರೀ ಕೊಂಡಜ್ಜಿ ಬಸಪ್ಪನವರು ಕಾಯಕದಲ್ಲಿ ಜೀವನ ಸೌಂದರ್ಯವನ್ನು ಕಂಡ ಒಬ್ಬ ಕರ್ಮಯೋಗಿ ಚಿತ್ರದುರ್ಗ ಜಿಲ್ಲೆಯ ಹರಿಹರ ತಾಲೂಕಿನ ಕೊಂಡಜ್ಜಿ ಗ್ರಾಮದಲ್ಲಿ ಇವರು ಜನಿಸಿದರು. ಬೆಂಗಳೂರು ಮತ್ತು ಪುಣೆಯಲ್ಲಿ ವಿದ್ಯಾಭ್ಯಾಸ ಮಾಡಿ ಬಿ.ಎಸ್ಸಿ., ಎಲ್.ಎಲ್.ಬಿ., ಪದವಿಗಳನ್ನು ಗಳಿಸಿದರು. 1941 ರಲ್ಲಿ ದಾವಣಗೆರೆಯಲ್ಲಿ ವಕೀಲಿ ವೃತ್ತಿಯನ್ನಾರಂಭಿಸಿದ ಇವರು ಅಂದಿನಿಂದಲೇ ಸಾರ್ವಜನಿಕ ಸೇವಾ ಕ್ಷೇತ್ರಕ್ಕೆ ಇಳಿದರು. 1942 ರಲ್ಲಿಯೇ ಚಿತ್ರದುರ್ಗ ಜಿಲ್ಲೆಯ ಸಹಾಯಕ ಜಿಲ್ಲಾ ಸ್ಕೌಟ್ ಕಮಿಷನರ್ ಆಗಿ ಸ್ಕೌಟ್ ಚಳವಳಿಯ ಸಂಪರ್ಕಹೊಂದಿ ಆ ಕ್ಷೇತ್ರದಲ್ಲಿ ವಿಶಿಷ್ಟ ಸೇವೆಯನ್ನು ಕೊನೆಯವರೆಗೂ ಸಲ್ಲಿಸಿದರು. ಮುಂದೆ ಜಿಲ್ಲೆಯ . ಸ್ಕೌಟ್ ಕಮಿಷನರ್ ಆಗಿ 1951 ರಲ್ಲಿ ಆಸ್ಟ್ರಿಯಾ, ಇಟಲಿ, ಸ್ವಿಜರ್ಲೆಂಡ್, ಜರ್ಮನಿ, ಫ್ರಾನ್ಸ್, ಬ್ರಿಟನ್, ಬೆಲ್ಜಿಯಂ, ಡೆನ್‌ಮಾರ್ಕ್ ಮೊದಲಾದ ವಿದೇಶಗಳಿಗೆ ಭೇಟಿಯಿತ್ತು ಅಪಾರವಾದ ಅನುಭವವನ್ನು ಹೊಂದಿದರು.

ಸ್ಕೌಟ್ ವಿಭಾಗದಲ್ಲಿ ಹೇಗೋ ಹಾಗೆ ಸಹಕಾರ ಕ್ಷೇತ್ರದಲ್ಲಿಯೂ ಇವರ ಸೇವೆ ಅನುಪಮವಾದುದು. ರಾಜಕೀಯ ಕ್ಷೇತ್ರದಲ್ಲಿಯೂ ಸಹ ಇವರು ಅವಿಸ್ಮರಣೀಯ ಸೇವೆ ಸಲ್ಲಿಸಿದರು. 1962 ರಲ್ಲಿ ಮೈಸೂರು ವಿಧಾನ ಸಭೆಗೆ ಆಯ್ಕೆಯಾಗಿ ಸಹಕಾರ ಮತ್ತು ವಾರ್ತಾ ಇಲಾಖೆಯ ಉಪಮಂತ್ರಿಗಳಾದರು. 1971 ರಲ್ಲಿ ಲೋಕಸಭಾ ಸದಸ್ಯರಾಗಿ ಆಯ್ಕೆಯಾದ ಇವರು ಆರೋಗ್ಯ ಮತ್ತು ಕುಟುಂಬ ಯೋಜನಾ ಇಲಾಖೆಯ ಕೇಂದ್ರ ಉಪಮಂತ್ರಿಗಳಾಗಿ ಸೇವೆ ಸಲ್ಲಿಸಿದರು. ಮಣಿಲಾದಲ್ಲಿ ನಡೆದ ಅಂತರಾಷ್ಟ್ರೀಯ ಕುಟುಂಬ ಯೋಜನೆ ಸಮ್ಮೇಳನದಲ್ಲಿ ಭಾರತ ತಂಡದ ನಾಯಕರಾಗಿ ಭಾಗವಹಿಸಿದರು. 1977 ರಲ್ಲಿ ಮತ್ತೆ ಲೋಕಸಭೆಯ ಸದಸ್ಯರಾಗಿ ಆಯ್ಕೆಯಾದರು.

ಶ್ರೀ ಕೊಂಡಜ್ಜಿಯವರು ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್‌ಗಳ ಹೆಡ್‌ಕ್ವಾರ್ಟರ್ಸ್ ಕಮಿಷನರಾಗಿ, ಸ್ಟೇಟ್ ಚೀಫ್ ಕಮಿಷನರಾಗಿ ಗಣನೀಯವಾದ ಸೇವೆ ಸಲ್ಲಿಸಿದರು. ಸ್ಕೌಟ್ ಮತ್ತು ಗೈಡ್ ಚಳವಳಿಗೆ ಒಂದು ಲಕ್ಷ ರೂ. ಗಳವಂತಿಗೆಯನ್ನು 1976 ರಲ್ಲಿ ನೀಡಿದರು. ಸ್ಕೌಟ್ ಕ್ಷೇತ್ರದಲ್ಲಿ ಸಲ್ಲಿಸಿದ ವಿಶಿಷ್ಟ ಸೇವೆಗಾಗಿ 'ಬೆಳ್ಳಿಯ ಆನೆ' ರಾಷ್ಟ್ರೀಯ ಪ್ರಶಸ್ತಿಯನ್ನು ಪಡೆದ ಮಾನ್ಯರು ಇವರು.

ಕೊಂಡಜ್ಜಿಯಲ್ಲಿ 'ಜಲದರ್ಶಿನಿ ಜ್ಞಾನಪೀಠವನ್ನು 1976 ರಲ್ಲಿ ಸ್ಥಾಪಿಸಿ ಅದರ ಸ್ಥಾಪಕಾಧ್ಯಕ್ಷರಾಗಿದ್ದರು. ಹುಟ್ಟಿದ ಹಳ್ಳಿಗೆ ಅವರು ಸಲ್ಲಿಸಿದ ಸೇವೆ ಅಪಾರ.

ರಾಜಕೀಯ, ಸಾಮಾಜಿಕ ಸೇವಾ ಕ್ಷೇತ್ರದಲ್ಲಿ ಸ್ಕೌಟ್ ವಿಭಾಗದಲ್ಲಿ, ಸಹಕಾರ ಕ್ಷೇತ್ರದಲ್ಲಿ ಅಭೂತಪೂರ್ವವಾದ ಸೇವೆ ಸಲ್ಲಿಸಿದ ಕೊಂಡಜ್ಜಿಯವರು ಸ್ನೇಹಪರತೆ, ಶಿಸ್ತು, ಸಭ್ಯತೆ, ಸಮಚಿತ್ತತೆ ಇವುಗಳಿಗೆ ನೆಲಮನೆಯಾಗಿದ್ದರು.

ಕರ್ನಾಟಕದ ಸಾರ್ವಜನಿಕ ಕ್ಷೇತ್ರದಲ್ಲಿ ಒಂದು ಸ್ಮರಣೀಯ ಹೆಸರು ಕೊಂಡಜ್ಜಿ ಬಸಪ್ಪ. ಹಳ್ಳಿಯ ಬದುಕಿನೊಂದಿಗೆ ಬೆಳೆದು ಬಂದ ಅವರ ಜೀವನ ಸಾರ್ವಜನಿಕರೆದುರಿಗೆ ತೆರೆದಿಟ್ಟ ಒಂದು ಸರಳ ಗ್ರಂಥ! ಹುಟ್ಟಿನೊಂದಿಗೆ ಮೈಗೂಡಿಸಿಕೊಂಡಿದ್ದ ಸ್ವಯಂ ಸೇವೆಯ ಸ್ಫೂರ್ತಿ, ದಣಿವೆನ್ನದ ಕಾರ್ಯಶ್ರದ್ಧೆ ಮತ್ತು ಅನನ್ಯಯ ಪ್ರಾಮಾಣಿಕತೆಗಳಿಂದ ಬದುಕಿನ್ನುದ್ದಕ್ಕೂ ಆದರ್ಶವಾಗಿದ್ದ ಅವರ ಜೀವನ ಸ್ನೇಹಪರತೆ, ಶಿಸ್ತು ಮತ್ತು ಸೌಜನ್ಯತೆಗಳಿಗೆ ಒಂದು ಉಜ್ವಲ ಉದಾಹರಣೆ.



ಕೊಂಡಜ್ಜಿ ಬಸಪ್ಪನವರು ದುಡಿದ ಕ್ಷೇತ್ರಗಳು ಒಂದೆರಡಲ್ಲ. ಹಳ್ಳಿಯಿಂದ ದಿಲ್ಲಿಯವರೆಗೆ, ಸಾಮಾಜಿಕದಿಂದ ರಾಜಕೀಯದವರೆಗೆ, ಸಹಕಾರದಿಂದ ಸ್ಕೌಟ್ ಚಳವಳಿಯವರೆಗೆ – ಹೀಗೆ ಸಮಷ್ಟಿ ಕ್ಷೇಮದ ಸರ್ವಕ್ಷೇತ್ರದಲ್ಲೂ ಅವರು ಸೇವೆ ಸಲ್ಲಿಸಿದ್ದಾರೆ. ವಕೀಲಿ ವೃತ್ತಿಯಿಂದ ಆರಂಭವಾದ ಅವರ ಸಾರ್ವಜನಿಕ ಜೀವನ ಕಂಡ ಸಿಹಿಗಿಂತಲೂ ಉಂಡ ಕಹಿಯೇ ಹೆಚ್ಚು ಆದರೂ ಅವರು ಹತ್ತು ಜನರ ಹಿತದ ಹುಚ್ಚು ಹಚ್ಚಿಕೊಂಡು ಕೊನೆಯುಸಿರವರೆಗೂ ದುಡಿದ ಶ್ರೇಷ್ಠ ಜೀವ.

ಹುಟ್ಟಿದ ಊರು ಕೊಂಡಜ್ಜಿಯಿರಲಿ, ಸೇವೆ ಸಲ್ಲಿಸಿದ ಚಿತ್ರದುರ್ಗ ದಾವಣಗೆರೆ ಜಿಲ್ಲೆಯಿರಲಿ ಅಥವಾ ಇಡೀ ಕರ್ನಾಟಕ ರಾಜ್ಯವೇ ಇರಲಿ, ಅವರ ಪರಿಶುದ್ಧ ಸೇವಾ ಹಸ್ತದ ಪರಿಚಯ ಇಲ್ಲದವರಿಲ್ಲ. ಗ್ರಾಮಾಂತರ ಪ್ರದೇಶದ ಅಭಿವೃದ್ಧಿಗಾಗಿ, ದೀನ ದಲಿತರ ಏಳಿಗೆಗಾಗಿ, ಯುವ ಜನಾಂಗದ ಕ್ಷೇಮಕ್ಕಾಗಿ, ರೈತರ ನೆಮ್ಮದಿಗಾಗಿ ಕೊಂಡಜ್ಜಿ ಬಸಪ್ಪನವರಿಂದ ಸಂದಿರುವ ಸೇವೆ ಅನುಪಮವಾದುದು. ಎಲ್ಲಕ್ಕಿಂತ ಮಿಗಿಲಾದುದೆಂದರೆ, ಸ್ಕೌಟ್ಸ ಮತ್ತು ಗೈಡ್ಸ್ ಚಳವಳಿಗೆ ಅವರು ಸಲ್ಲಿಸಿರುವ ಅದ್ವಿತೀಯ ಸೇವೆ ಸ್ಕೌಟ್ [] ಗೈಡ್ ಚಳವಳಿ ಅವರ ಉಸಿರಾಗಿತ್ತು.

ಶಾಸಕರಾಗಿ, ರಾಜ್ಯ ಮತ್ತು ಕೇಂದ್ರ ಸರ್ಕಾರಗಳಲ್ಲಿ ಸಚಿವರಾಗಿ, ಲೋಕಸಭಾ ಸದಸ್ಯರಾಗಿ ಸೇವೆ ಸಲ್ಲಿಸಿದ ಕೊಂಡಜ್ಜಿ ಬಸಪ್ಪನವರು, ರಾಜಕಾರಣಿಗಳು ಶುದ್ಧ ಹಾಗೂ ಸರಳ ಜೀವನವನ್ನು ಹೇಗೆ ನಡೆಸಬಹುದೆಂಬುದಕ್ಕೆ ಜೀವಂತ ಸಾಕ್ಷಿಯಾಗಿದ್ದರು. ಜನಸಮುದಾಯವಿರಲಿ, ಸರ್ಕಾರಿ ಅಧಿಕಾರಿ ವರ್ಗವಿರಲಿ ಅವರಿಗಿದ್ದ ಸಂಪರ್ಕ ಅನನ್ಯವಾದುದು. ಪ್ರೇಮ, ವಿಶ್ವಾಸ, ಸಹನೆ, ಸಮನ್ವಯಗಳ ಸಾಕಾರಮೂರ್ತಿಯಾಗಿದ್ದ ಕೊಂಡಜ್ಜಿಯವರ ನೆನಪೇ ಒಂದು ಆಸಿರ್ವಚನೀಯ ಅನುಭವ.

ರಾಜ್ಯ ಹಾಗೂ ರಾಷ್ಟ್ರಮಟ್ಟದ ಅನೇಕ ಸಮಿತಿಗಳಲ್ಲಿ ಸದಸ್ಯರಾಗಿ ಅಧ್ಯಕ್ಷರಾಗಿ ಕಾರ್ಯ ನಿರ್ವಹಿಸಿದ್ದ ಕೊಂಡಜ್ಜಿ ಬಸಪ್ಪನವರು ವಿಶ್ವದ ಅನೇಕ ಪ್ರಮುಖ ರಾಷ್ಟಗಳ ಪರಿಚಯವನ್ನು ಪಡೆದಿದ್ದರು.

ಹಳ್ಳಿಗರ ಬದುಕಿನಲ್ಲಿ ನೆಮ್ಮದಿ ಮತ್ತು ಯುವಜನಾಂಗದಲ್ಲಿ ಶಿಸಿಸ್ತು ಸಭ್ಯತೆ [] ಇವು ಕೊಂಡಜ್ಜಿ ಬಸಪ್ಪನವರು ಹಗಲಿರುಳೂ ಚಿಂತಿಸುತ್ತಿದ್ದ ಎರಡೂ ಆಸೆಗಳು. ಆ ಆಸೆಗಳನ್ನು ಈಡೇರಿಸಲು ದಣಿವೆನ್ನದೆ ದುಡಿದ ಫಲವಾಗಿ ಅವರ ದೇಹ ಹಣ್ಣಾಯಿತು. ಅದನ್ನೇ ಕಾದಿದ್ದ ದೈವ ತನಗೆ ಬೇಕೆಂದು ಎತ್ತಿಕೊಂಡಿತು.

ಪ್ರಜಾವಾಣಿ

*ದೊಡ್ಡಬಳ್ಳಾಪುರದಲ್ಲಿ 27ನೇ ರಾಜ್ಯಮಟ್ಟದ ಜಾಂಬೊರೇಟ್ ಸಮಾರೋಪ*

## ಸಹಬಾಳ್ವೆ ಕಲಿಸುವ ಸ್ಕೌಟ್ಸ್, ಗೈಡ್ಸ್: ಸಿಎಂ

**ಪ್ರಜಾವಾಣಿ ವಾರ್ತೆ**

ದೊಡ್ಡಬಳ್ಳಾಪುರ: ಸ್ಕೌಟ್ಸ್ ಮತ್ತು ಗೈಡ್ಸ್‌ನಂತಹ ಶಿಬಿರಗಳಲ್ಲಿ ಭಾಗವಹಿಸಿದಾಗ ಮಕ್ಕಳು ಸಹಬಾಳ್ವೆಯೊಂದಿಗೆ ಬದುಕುವುದನ್ನು ಕಲಿಯುತ್ತಾರೆ ಎಂದು ಮುಖ್ಯಮಂತ್ರಿ ಸಿದ್ದರಾಮಯ್ಯ ಹೇಳಿದರು.

ನಗರದ ಡಾ.ಅನಿಬೆಸೆಂಟ್ ಪಾರ್ಕ್‌ನಲ್ಲಿ ಗುರುವಾರ ನಡೆದ 27ನೇ ರಾಜ್ಯಮಟ್ಟದ ಸ್ಕೌಟ್ಸ್ ಮತ್ತು ಗೈಡ್ಸ್ ಜಾಂಬೊರೇಟ್‌ನ ಸಮಾರೋಪ ಸಮಾರಂಭದಲ್ಲಿ ಅವರು ಮಾತನಾಡಿದರು.

ಗುಣಮಟ್ಟದ ಶಿಕ್ಷಣ ನೀಡಿದಾಗ ಮಾತ್ರ ದಾರ್ಶನಿಕ ಪ್ರಜೆಗಳು ರೂಪುಗೊಳ್ಳಲು ಸಾಧ್ಯ. ಈ ನಿಟ್ಟಿನಲ್ಲಿ ಸ್ಕೌಟ್ಸ್ ಮತ್ತು ಗೈಡ್ಸ್ ಸೇವೆ ಶ್ಲಾಘನೀಯ ಎಂದು ಅವರು ಮೆಚ್ಚುಗೆ ವ್ಯಕ್ತಪಡಿಸಿದರು.

ಜವಾಬ್ದಾರಿಯುತ ಮಕ್ಕಳನ್ನು ರೂಪಿಸುವ ಹೊಣೆಗಾರಿಕೆ ಸಮಾಜದ ಎಲ್ಲರ ಮೇಲಿದೆ. ಜಾಗತಿಕಮಟ್ಟದಲ್ಲಿ ದೇಶ ಗುರುತಿಸಿಕೊಳ್ಳಲು ಜವಾಬ್ದಾರಿಯುತ ಪ್ರಜೆಗಳ ಅಗತ್ಯವಿದೆ. ಮತ ಹಾಕುವ ಸ್ವಾತಂತ್ರ್ಯ ಸಿಕ್ಕರಷ್ಟೇ ಸಾಲದು ಬದುಕಿನಲ್ಲಿ ಬರುವ ಕಠಿಣ ಸವಾಲುಗಳನ್ನು ಮಕ್ಕಳು ಎದುರಿಸಿಲ್ಲುವಂತಹ ಶಕ್ತಿ ಅಗತ್ಯ ಎಂದು ಅವರು ಹೇಳಿದರು.

ಪ್ರಾಸ್ತಾವಿಕವಾಗಿ ಮಾತನಾಡಿದ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ರಾಜ್ಯ ಮುಖ್ಯ ಆಯುಕ್ತ ಪಿ.ಜಿ.ಆರ್ ಸಿಂಧ್ಯ ರಾಜ್ಯದಲ್ಲಿನ ಸ್ಕೌಟ್ಸ್ ಮತ್ತು ಗೈಡ್ಸ್ ತರಬೇತಿ ಕೇಂದ್ರಗಳ ಅಭಿವೃದ್ಧಿಗೆ ರಾಜ್ಯ ಸರ್ಕಾರ ಮುಂದಾಗಬೇಕು. ಸ್ಕೌಟ್ಸ್ ಮತ್ತು ಗೈಡ್ಸ್‌ಗಳಿಗೆ ಉದ್ಯೋಗ, ವೃತ್ತಿಪರ ಶಿಕ್ಷಣದಲ್ಲಿನ ಮೀಸಲಾತಿಯನ್ನು ಹೆಚ್ಚು ಮಾಡಬೇಕು. ಪ್ರಾಥಮಿಕ ಶಾಲಾ ಹಂತದಿಂದಿಂದ ಸ್ಕೌಟ್ಸ್ ಮತ್ತು ಗೈಡ್ಸ್ ಅನ್ನು ಕಡ್ಡಾಯ ಮಾಡುವ ಮೂಲಕ ಸರ್ಕಾರವೇ ಸಮವಸ್ತ್ರಗಳ ವಿತರಣೆ ಮಾಡಬೇಕು. ಸ್ಕೌಟ್ಸ್ ಮತ್ತು ಗೈಡ್ಸ್‌ನ ಶಿಕ್ಷಕರಿಗೆ ಮಾಸಿಕ ನೀಡಲಾಗುತ್ತಿರುವ ಗೌರವ ಧನವನ್ನು ₹ 75 ರಿಂದ ₹ 500ಗಳಿಗೆ ಹೆಚ್ಚಿಸಬೇಕು ಎಂದು ಮನವಿ ಮಾಡಿದರು.

ಸಮಾರೋಪ ಸಮಾರಂಭದಲ್ಲಿ ಜಿಲ್ಲಾ ಉಸ್ತುವಾರಿ ಸಚಿವ ಕೃಷ್ಣ ಬೈರೇಗೌಡ, ಸಂಸತ್ ಸದಸ್ಯ ಎಂ.ವೀರಪ್ಪ ಮೊಯಿಲಿ, ಲೋಕೋಪಯೋಗಿ ಸಚಿವ ಡಾ.ಎಚ್.ಸಿ. ಮಹದೇವಪ್ಪ, ವಾರ್ತಾ ಸಚಿವ ಆರ್. ರೋಷನ್‌ಬೇಗ್, ಬಯಾಪ ಅಧ್ಯಕ್ಷ ಆರ್.ಜಿ. ವೆಂಕಟಾಚಲಯ್ಯ, ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ರಾಜ್ಯ ಉಪಾಧ್ಯಕ್ಷ ಕೊಂಡಜ್ಜಿ ಬಿ.ಷಣ್ಮುಖಪ್ಪ, ರಾಜ್ಯ ಕಾರ್ಯದರ್ಶಿ ಸಿದ್ದಯ್ಯ, ಜಿಲ್ಲಾಧಿಕಾರಿ ಸಲ್ಮಾ ಕೆ.ಫಹೀಂ ಹಾಜರಿದ್ದರು.

ದೊಡ್ಡಬಳ್ಳಾಪುರದಲ್ಲಿ ಗುರುವಾರ ನಡೆದ 27ನೇ ರಾಜ್ಯಮಟ್ಟದ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಜಾಂಬೊರೇಟ್ ಸಮಾರೋಪ ಸಮಾರಂಭದಲ್ಲಿ ಡಾ.ಅನಿಬೆಸೆಂಟ್ ಪಾರ್ಕ್‌ನಲ್ಲಿ ನಿರ್ಮಿಸಿರುವ ವಿವಿಧ ಭವನಗಳ ನಾಮಫಲಕಗಳನ್ನು ಮುಖ್ಯಮಂತ್ರಿ ಸಿದ್ದರಾಮಯ್ಯ ಅನಾವರಣಗೊಳಿಸಿದರು. ಸಂಸತ್ ಸದಸ್ಯ ಎಂ.ವೀರಪ್ಪ ಮೊಯಿಲಿ, ಶಾಸಕ ಟಿ.ವೆಂಕಟರಮಣಯ್ಯ, ಸಚಿವರಾದ ಡಾ.ಎಚ್.ಸಿ.ಮಹದೇವಪ್ಪ, ಕೃಷ್ಣಬೈರೇಗೌಡ, ಆರ್.ರೋಷನ್‌ಬೇಗ್, ಬಯಾಪ ಅಧ್ಯಕ್ಷ ಆರ್.ಜಿ.ವೆಂಕಟಾಚಲಯ್ಯ ಹಾಜರಿದ್ದರು

**ಹಣಕಾಸು ನೆರವಿಗೆ ಶಾಸಕರ ಮನವಿ**

ನಗರಕ್ಕೆ ಕುಡಿಯುವ ನೀರಿನ ಬವಣೆ ನೀಗಿಸಲು ಎಸ್.ಎಸ್. ಘಾಟಿ ಸಮೀಪದಲ್ಲಿನ ವಿಶ್ವೇಶ್ವರಯ್ಯ ಪಿಕಪ್ ಡ್ಯಾಂ ಯೋಜನೆಗೆ 2015ನೇ ಸಾಲಿನ ಬಜೆಟ್‌ನಲ್ಲಿ ಹಣಕಾಸಿನ ನೆರವು ನೀಡುವಂತೆ ಹಾಗೂ ರಾಷ್ಟ್ರೀಯ ಮಟ್ಟದಲ್ಲಿ ಹೆಸರು ಮಾಡಿರುವ ಬೆಸೆಂಟ್ ಪಾರ್ಕ್‌ನಲ್ಲಿನ ಮೂಲ ಸೌಕರ್ಯಗಳ ಅಭಿವೃದ್ಧಿಗೆ ಆರ್ಥಿಕ ನೆರವು ನೀಡುವಂತೆ ಶಾಸಕ ಟಿ.ವೆಂಕಟರಮಣಯ್ಯ ಮನವಿ ಮಾಡಿದರು.

**ಜಿಲ್ಲಾ ಕೇಂದ್ರಕ್ಕೆ ಮನವಿ**

ದೊಡ್ಡಬಳ್ಳಾಪುರವನ್ನು ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಕೇಂದ್ರವನ್ನಾಗಿ ಮಾಡುವಂತೆ ಹಾಗೂ ಬೆಂಗಳೂರಿನಲ್ಲಿ ಕಾರ್ಯ ನಿರ್ವಹಿಸುತ್ತಿರುವ ಜಿಲ್ಲಾ ಮಟ್ಟದ ಎಲ್ಲ ಕಚೇರಿಗಳನ್ನು ನಗರಕ್ಕೆ ವರ್ಗಾವಣೆ ಮಾಡುವಂತೆ ಜಿಲ್ಲಾ ಹೋರಾಟ ಸಮಿತಿ ವತಿಯಿಂದ ಮುಖ್ಯಮಂತ್ರಿಗಳಿಗೆ ಮನವಿ ಪತ್ರ ಸಲ್ಲಿಸಲಾಯಿತು.









ಉದಯವಾಣಿ

# ಶಾಲಾ ಕಾಲೇಜಲ್ಲಿ ಸ್ಕೌಟ್ಸ್, ಗೈಡ್ಸ್ ಅಳವಡಿಕೆ: ಸಿಎಂ

## ■ ಗೈಡ್ಸ್ ಅಳವಡಿಕೆ ಕುರಿತು ಶಿಕ್ಷಣ ಇಲಾಖೆಯೊಂದಿಗೆ ಚರ್ಚೆ: ಮುಖ್ಯಮಂತ್ರಿ ಸಿದ್ದರಾಮಯ್ಯ ಭರವಸೆ

**ದೊಡ್ಡಬಳ್ಳಾಪುರ:** ಶಾಲಾ ಕಾಲೇಜುಗಳಲ್ಲಿ ಸ್ಕೌಟ್ಸ್ ಅಂಡ್ ಗೈಡ್ಸ್‌ನ ಕಡ್ಡಾಯ ಅಳವಡಿಕೆ ಹಾಗೂ ಚಟುವಟಿಕೆಗಳನ್ನು ಹೆಚ್ಚಿಸುವ ಕುರಿತು ಶಿಕ್ಷಣ ಇಲಾಖೆಯೊಂದಿಗೆ ಚರ್ಚಿಸಲಾಗುವುದು ಎಂದು ಮುಖ್ಯಮಂತ್ರಿ ಸಿದ್ದರಾಮಯ್ಯ ತಿಳಿಸಿದರು.

ನಗರದ ಅನಿಬೆಸೆಂಟ್ ಪಾರ್ಕ್‌ನಲ್ಲಿ ಭಾರತ್ ಸ್ಕೌಟ್ಸ್ ಅಂಡ್ ಗೈಡ್ಸ್ ಹಮ್ಮಿಕೊಂಡಿದ್ದ ಕರ್ನಾಟಕದ 27ನೇ ಜಾಂಬೋರೇಟ್ ಕಾರ್ಯಕ್ರಮದ ಸಮಾರೋಪದಲ್ಲಿ ಮಾತನಾಡಿದ ಅವರು, .ಜಾತ್ಯತೀತ ರಾಷ್ಟ್ರ ನಿರ್ಮಾಣ ಹಾಗೂ ಸಮಾನತೆಗಳನ್ನು ಬಿಂಬಿಸುವ ಪಠ್ಯೇತರ ಶಿಕ್ಷಣ ಇಂದಿನ ಅಗತ್ಯವಾಗಿದೆ ಎಂದರು.

ಸ್ಕೌಟ್ಸ್ ಅಂಡ್ ಗೈಡ್ಸ್‌ನಂತಹ ಚಳವಳಿಗಳ ಪಾತ್ರ ಮಹತ್ವದ್ದಾಗಿದೆ. ಮಕ್ಕಳು ಶಾಲೆ, ಪಾಠ, ಹೋಂ ವರ್ಕ್ ಮಾಡುವುದರಲ್ಲಿಯೇ ನಿರತರಾಗಿದ್ದು, ಪಠ್ಯೇತರ ಚಟುವಟಿಕೆಗಳು ಕಡಿಮೆಯಾಗುತ್ತಿವೆ. ದೇಶದ ಉಜ್ವಲ ಭವಿಷ್ಯ ನಿರ್ಮಾಣಕ್ಕೆ ಸಂವಿಧಾನದ ಆಶಯದಂತೆ ಆರ್ಥಿಕ ಹಾಗೂ ಸಾಮಾಜಿಕ ಸ್ವಾತಂತ್ರ್ಯ ಎಲ್ಲರಿಗೂ ಲಭಿಸಬೇಕು ಎಂದರು.

■ **ಹೆಚ್ಚಿನ ಸಹಕಾರ:** ಮಕ್ಕಳಲ್ಲಿ ಆತ್ಮವಿಶ್ವಾಸ ಹಾಗೂ ವೈಚಾರಿಕತೆ ಬೆಳೆಯದಿದ್ದರೆ ಇಂದಿನ ಕಠಿಣ ಸವಾಲುಗಳನ್ನು ಎದುರಿಸಲು ಸಾಧ್ಯವಾಗುವುದಿಲ್ಲ. ಸ್ಕೌಟ್ಸ್ ಅಂಡ್ ಗೈಡ್ಸ್‌ನೊಂದಿಗೆ ತೊಡಗಿಸಿಕೊಳ್ಳುವುದರಿಂದ ಶಿಸ್ತು, ಆತ್ಮವಿಶ್ವಾಸ ಹೆಚ್ಚಲು ಸಹಕಾರಿಯಾಗಲಿದೆ. ರಾಜ್ಯ ಸರ್ಕಾರ ಸ್ಕೌಟ್ಸ್ ಮತ್ತು ಗೈಡ್ಸ್‌ಗೆ ಹೆಚ್ಚಿನ ಸಹಕಾರ ನೀಡಲಿದೆ ಎಂದು ತಿಳಿಸಿದರು.

■ **ರಸ್ತೆ ಅಭಿವೃದ್ಧಿಗೆ 300 ಕೋಟಿ ರೂ.:** ಲೋಕೋಪಯೋಗಿ ಡಾ.ಎಚ್.ಸಿ.ಮಹಾದೇವಪ್ಪ ಮಾತನಾಡಿ, ಯಲಹಂಕದಿಂದ ಹಿಂದೂಪುರ ರಸ್ತೆಗೆ ರಾಜ್ಯ ರಸ್ತೆ ಅಭಿವೃದ್ಧಿ ನಿಗಮದಿಂದ 300 ಕೋಟಿ ರೂ. ಮಂಜೂರಾಗಿದೆ ಎಂದರು.

ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ರಾಜ್ಯ ಮುಖ್ಯ ಆಯುಕ್ತ ಪಿ.ಜಿ.ಆರ್.ಸಿಂಧ್ಯ ಮಾತನಾಡಿ, ರಾಜ್ಯದಲ್ಲಿನ ಸ್ಕೌಟ್ಸ್ ಮತ್ತು ಗೈಡ್ಸ್ ತರಬೇತಿ ಕೇಂದ್ರಗಳ ಅಭಿವೃದ್ಧಿಗೆ ರಾಜ್ಯ ಸರ್ಕಾರ ಮುಂದಾಗಬೇಕು. ಸ್ಕೌಟ್ಸ್ ಮತ್ತು ಗೈಡ್ಸ್‌ಗಳಿಗೆ ಉದ್ಯೋಗ, ವೃತ್ತಿಪರ ಶಿಕ್ಷಣದಲ್ಲಿನ ಮೀಸಲಾತಿಯನ್ನು ಹೆಚ್ಚಿಸಬೇಕು ಎಂದು ಹೇಳಿದರು.

ಪ್ರಾಥಮಿಕ ಶಾಲಾ ಹಂತದಿಂದಿಂದ ಸ್ಕೌಟ್ಸ್ ಮತ್ತು ಗೈಡ್ಸ್ ಅನ್ನು ಕಡ್ಡಾಯ ಮಾಡುವ ಮೂಲಕ ಸರ್ಕಾರವೇ ಸಮವಸ್ತ್ರಗಳ ವಿತರಣೆ ಮಾಡಬೇಕು. ಸ್ಕೌಟ್ಸ್ ಮತ್ತು ಗೈಡ್ಸ್‌ನ ಶಿಕ್ಷಕರಿಗೆ ಮಾಸಿಕ ನೀಡಲಾಗುತ್ತಿರುವ ಗೌರವಧನವನ್ನು 75 ರೂ.ನಿಂದ 500 ರೂ.ಗೆ ಹೆಚ್ಚಿಸಬೇಕು ಎಂದು ಮನವಿ ಮಾಡಿದರು.

ಸಂಸದ ಎಂ.ವೀರಪ್ಪ ಮೊಯ್ಲಿ, ಕೃಷಿ ಸಚಿವ ಕೃಷ್ಣ ಭೈರೇಗೌಡ, ಲೋಕೋಪಯೋಗಿ ಡಾ.ಎಚ್.ಸಿ.ಮಹಾದೇವಪ್ಪ, ವಾರ್ತಾ ಸಚಿವ ಆರ್.ರೋಷನ್‌ಬೇಗ್ ಭಾಗವಹಿಸಿದ್ದರು.



ದೊಡ್ಡಬಳ್ಳಾಪುರದ ಡಾ.ಅನಿಬೆಸೆಂಟ್ ಪಾರ್ಕ್‌ನಲ್ಲಿ ನಡೆದ ಸ್ಕೌಟ್ಸ್ ಮತ್ತು ಗೈಡ್ಸ್ ಜಾಂಬೋರೇಟ್‌ನ ಸಮರೋಪದ ಸ್ಮರಣ ಸಂಚಿಕೆಯನ್ನು ಮುಖ್ಯಮಂತ್ರಿ ಸಿದ್ದರಾಮಯ್ಯ, ಲೋಕೋಪಯೋಗಿ ಸಚಿವ ಡಾ.ಎಚ್.ಸಿ.ಮಹದೇವಪ್ಪ ಬಿಡುಗಡೆ ಮಾಡಿದರು.

### ಬಜೆಟಲ್ಲಿ ಹಣ ನೀಡಲು ಮನವಿ

**ದೊಡ್ಡಬಳ್ಳಾಪುರ** ನಗರದಲ್ಲಿನ ಕುಡಿಯುವ ನೀರಿನ ಬವಣೆ ನೀಗಿಸಲು ಎಸ್.ಎಸ್.ಘಾಟಿ ಸಮೀಪದಲ್ಲಿನ ವಿಶ್ವೇಶ್ವರಯ್ಯ ಪಿಕಪ್ ಡ್ಯಾಂ ಯೋಜನೆಗೆ 2015ನೇ ಸಾಲಿನ ಬಜೆಟ್‌ನಲ್ಲಿ ಹಣಕಾಸಿನ ನೆರವು ನೀಡುವಂತೆ ಶಾಸಕ ಟಿ.ವೆಂಕಟರಮಣಯ್ಯ ಮುಖ್ಯಮಂತ್ರಿ ಸಿದ್ದರಾಮಯ್ಯ ಅವರಿಗೆ ಮನವಿ ಸಲ್ಲಿಸಿದರು.

ನಗರದ ಅನಿಬೆಸೆಂಟ್ ಪಾರ್ಕ್‌ನಲ್ಲಿ ನಡೆದ ಕರ್ನಾಟಕದ 27ನೇ ಜಾಂಬೋರೇಟ್‌ನಲ್ಲಿ ಪಾಲ್ಗೊಂಡಿದ್ದ ಮುಖ್ಯಮಂತ್ರಿಗಳನ್ನು ಭೇಟಿ ಮಾಡಿ ಮಾತನಾಡಿದ ಅವರು, ರಾಷ್ಟ್ರೀಯ ಮಟ್ಟದಲ್ಲಿ ಹೆಸರು ಮಾಡಿರುವ ಬೆಸೆಂಟ್ ಪಾರ್ಕ್‌ನಲ್ಲಿನ ಮೂಲ ಸೌಕರ್ಯಗಳ ಅಭಿವೃದ್ಧಿಗೆ ಆರ್ಥಿಕ ನೆರವು ನೀಡುವಂತೆ ಮನವಿ ಮಾಡಿದರು. ಇದೇವೇಳೆ ದೊಡ್ಡಬಳ್ಳಾಪುರವನ್ನು ಬೆಂಗಳೂರು ಗ್ರಾಮಾಂತರ ಜಿಲ್ಲಾ ಕೇಂದ್ರವಾಗಿ ಮಾಡುವುದು ಸೇರಿದಂತೆ ಬೆಂಗಳೂರಿನಲ್ಲಿ ಕಾರ್ಯನಿರ್ವಹಿಸುತ್ತಿರುವ ಗ್ರಾಮಾಂತರ ಜಿಲ್ಲಾ ಮಟ್ಟದ ಎಲ್ಲಾ ಕಚೇರಿಗಳನ್ನು ನಗರಕ್ಕೆ ವರ್ಗಾವಣೆ ಮಾಡುವಂತೆ ಜಿಲ್ಲಾ ಹೋರಾಟ ಸಮಿತಿಮುಖ್ಯಮಂತ್ರಿಗೆ ಮನವಿ ಪತ್ರ ಸಲ್ಲಿಸಿತು.









# ಜಾಂಬೋರೇಟ್ ಗೀತೆ

ರಕ್ಷಣೆ ರಕ್ಷಣೆ ನೀರು ನೆಲದ ರಕ್ಷಣೆ
ರಕ್ಷಣೆ ರಕ್ಷಣೆ ಸಕಲ ಜೀವ ರಕ್ಷಣೆ
ಇದೇ ನಮ್ಮ ಸ್ಕೌಟು-ಗೈಡು ಘೋಷಣೆ
ನಮ್ಮ ನಿಮ್ಮ ಎಲ್ಲರೆಲ್ಲರಾ ಹೊಣೆ !

ಪ್ರೀತಿ-ಪ್ರೇಮ ನಮ್ಮ ಸೂತ್ರ
ಸ್ನೇಹ-ಸಹನ ನಮ್ಮ ಪಾತ್ರ
ನಿಷ್ಠೆಯೊಂದೆ ನಮಗೆ ನೇತ್ರ
ದೇಶ ಸೇವೆ ನಮ್ಮ ಮಂತ್ರ !

ದೇವ ಕೊಟ್ಟ ಕರ್ಮಭೂಮಿ
ಜೀವ ಕೊಟ್ಟ ಜನ್ಮಭೂಮಿ
ಕೂಡಿ ಕಲಿತು ನಲಿಯೋಣ
ಹಾಡಿ ನಾವು ಬಾಳೋಣ !

ಪ್ರಕೃತಿ ಮಾತೆ ನಮ್ಮ ಪುಣ್ಯ
ಅದನು ಪಡೆದ ನಾವೇ ಧನ್ಯ
ಉಳಿಸಿ ಬೆಳೆಸಿ ಬದುಕನನ್ಯ
ಗಳಿಸ ಬನ್ನಿ ಲೋಕಮಾನ್ಯ
ರಕ್ಷಣೆ ರಕ್ಷಣೆ ನೀರು ನೆಲದ ರಕ್ಷಣೆ

ಗೊ.ರು.ಚ

ಶತಾಯುಷಿ ಸ್ಕೌಟ್
ವ್ಯಕ್ತಿತ್ವ ವಿಕಸನ, ಸ್ವಾವಲಂಬನೆ, ಶಿಸ್ತು, ಸಮಾಜ ಸೇವೆಗಳ 'ಗರಡಿ ಮನೆ'

# ಮಾರ್ಚ್ 20, 2008ರ ತರಂಗ ವಾರಪತ್ರಿಕೆಯಲ್ಲಿ ಪ್ರಕಟವಾದ ಲೇಖನದ ಆಯ್ದ ಭಾಗಗಳು

## ಕ್ಷಮಿಸಿ... ಭಕ್ಷೀಸು ಬೇಡ !

ಅಮೆರಿಕಾ ಸಂಯುಕ್ತ ಸಂಸ್ಥಾನದಲ್ಲಿ ಸ್ಕೌಟಿಂಗ್ ಆರಂಭವಾದದ್ದು ಬಹಳ ವಿಶಿಷ್ಟ ರೀತಿಯಲ್ಲಿ. ಅಮೆರಿಕಾ ವಾಣಿಜ್ಯೋದ್ಯಮಿ ವಿಲಿಯಮ್ ಡೀ ಬಾಯ್ಸ್ ಕಾರ್ಯನಿಮಿತ್ತ ಲಂಡನ್‌ಗೆ ಪಯಣಿಸುತ್ತಿದ್ದರು. ಹಿಮ ಸುರಿಯುತ್ತಿದ್ದ ಆ ದಿನ ಅವರಿಗೆ ದಾರಿ ತಿಳಿಯದೆ ಕಕ್ಕಾವಿಕ್ಕಿಯಾಗಿ, ಹತ್ತಿರದಲ್ಲೇ ನಡೆದುಹೋಗುತ್ತಿದ್ದ ದಾರಿಹೋಕ ಬಾಲಕನಲ್ಲಿ ವಿಳಾಸವನ್ನು ಕೇಳಿದರು. ಆಗ ಬಾಲಕ ಅವರನ್ನು ಸರಿಯಾದ ವಿಳಾಸಕ್ಕೆ ತಲಪಲು ಸಹಾಯ ಮಾಡಿದ. ಅದಕ್ಕೆ ಪ್ರತಿಯಾಗಿ ಅವರು ಅವನಿಗೆ ಹಣ ನೀಡಿದಾಗ ಆ ಬಾಲಕ ದಿಟ್ಟತನದಿಂದ, 'ಕ್ಷಮಿಸಿ ನಾನೊಬ್ಬ ಸ್ಕೌಟ್, ನಾನು ಭಕ್ಷೀಸು ತೆಗೆದುಕೊಳ್ಳುವುದಿಲ್ಲ' ಎಂದು ಹೇಳಿ ಹೋಗಿಯೇ ಬಿಟ್ಟ. ವಿಲಿಯಮ್ ಅವರಿಗೆ ಬಾಲಕನ ದಿಟ್ಟತನ ಮತ್ತು ಪ್ರಾಮಾಣಿಕತೆ ಸಂತೋಷವನ್ನೂ ಆಶ್ಚರ್ಯವನ್ನೂ ಒಟ್ಟಿಗೇ ಉಂಟು ಮಾಡಿತು. ಆ ಬಳಿಕ ಅವರು ಲಂಡನ್ನಿನ ಪ್ರಧಾನ ಕಚೇರಿಗೆ ತೆರಳಿ ಸ್ಕೌಟ್ ಬಗ್ಗೆ ಮಾಹಿತಿ ಪಡೆದುಕೊಂಡು, ಅಮೆರಿಕದಲ್ಲಿಯೂ ಸ್ಕೌಟ್ ಹರಡಲು ಕಾರಣರಾದರು. ಅಲ್ಲಿನ ಭವನವೊಂದರಲ್ಲಿ ಇಂದಿಗೂ ಅನಾಮಧೇಯ ಬಾಲಕನ ನೆನಪನ್ನು ಸ್ಮರಿಸಲಾಗುತ್ತದೆ. ಅತ್ಯಂತ ಉನ್ನತ ಮಟ್ಟದ ಸ್ಕೌಟ್ ಕಾರ್ಯಕ್ರಮಗಳೆಲ್ಲ ಅಮೆರಿಕಾದಲ್ಲಿ ನಡೆದಯುತ್ತವೆ. ವಿಶ್ವದ ಸ್ಕೌಟ್ ಗಣತಿಯಲ್ಲಿ ಅಮೆರಿಕಾ ಅಗ್ರಸ್ಥಾನ ಪಡೆದಿದೆ.

*****

## ಸ್ಕೌಟ್ ವೈಶಿಷ್ಟ್ಯಗಳು



ಮೂರು ಬೆರಳನ್ನು ತೋರಿಸುವ ಬಲಗೈ ವಂದನೆ, ಎಡಗೈ ಹಸ್ತಲಾಘವ ಸ್ಕೌಟ್‌ಗಳ ವಿಶೇಷತೆಗಳಲ್ಲೊಂದು. ಸ್ಕೌಟ್ ದಳ ಕುದುರೆ ಲಾಳಾಕಾರದಲ್ಲಿ ನೆರೆಯುತ್ತದೆ.

ಸ್ಕೌಟ್ ಸಭೆಗಳಿಗೆ ಆಗಮಿಸಿದ ಅತಿಥಿಗಳನ್ನು ಒಳಗೊಳ್ಳುವ ಅಂಗವಾಗಿ ಅವರಿಗೂಕಂಠವಸ್ತ್ರ ತೊಡಿಸಿ ಸ್ಕೌಟ್‌ಗಳು ಸಂಭ್ರಮಿಸುತ್ತಾರೆ. ಸಮವಸ್ತ್ರದೊಂದಿಗೆ ಕಂಠವಸ್ತ್ರವನ್ನು ಧರಿಸುವುದು ಸ್ಕೌಟ್‌ಗಳ ವಿಶೇಷತೆ. ಈ ಕಂಠವಸ್ತ್ರದ ಶುಚಿತ್ವ ಆಯಾ ಸ್ಕೌಟ್‌ನ ಶಿಸ್ತನ್ನು ಸೂಚಿಸುತ್ತದೆ. ತುರ್ತು ಸಂದರ್ಭಗಳಲ್ಲಿ ಈ ಕರವಸ್ತ್ರ ಹಗ್ಗದಂತೆ, ಬ್ಯಾಂಡೇಜ್‌ನಂತೆಯೂ ಉಪಯೋಗಕ್ಕೆ ಬರುತ್ತದೆ.

ಸ್ಕೌಟ್ ದಂಡ, ಸ್ಕೌಟ್ ಕಿಟ್‌ನ ಉಪಯುಕ್ತ ಸೇರಿಕೆ. ಪರ್ವತ ಪ್ರದೇಶಗಳಲ್ಲಿ ಹಾದು ಹೋಗುವಾಗ, ನಿರ್ಜನ ಪ್ರದೇಶಗಳಲ್ಲಿ ಕಾರ್ಯ ನಿರತವಾಗಿದ್ದಾಗ ಇದು ಉಪಯುಕ್ತ. ಅಷ್ಟೇ ಅಲ್ಲ. ಇಂಥ ಹಲವಾರು ದಂಡಗಳನ್ನು ಉಪಯೋಗಿಸಿ ಸೇತುವೆ ನಿರ್ಮಿಸುವುದೂ, ತೆಪ್ಪ ರಚಿಸುವುದೂ, ಧ್ವಜ ಸ್ತಂಭ ರಚಿಸುವುದೂ ಸಾಧ್ಯ. ನದಿಯ ಆಳ ಕಂಡುಹಿಡಿಯಲು, ಕಾಲುವೆ ಹಾರಲು ಉಪಯುಕ್ತ. ದಂಡದಲ್ಲಿ ಮೀಟರ್, ಸೆಂ.ಮೀ.ಗಳನ್ನು ಗುರುತಿಸಿಕೊಳ್ಳುವ ಸ್ಕೌಟ್‌ಗಳಿಗೆ ದಂಡ ಬಹೂಪಯೋಗಿ ಅಸ್ತ್ರ. ಕೆಲವರು ತಮ್ಮ ಸಾಧನೆಗಳನ್ನು ದಂಡದ ಮೇಲೆ ಕೆತ್ತಿಕೊಳ್ಳುವುದೂ ಇದೆ.

ಸ್ಕೌಟ್‌ಗಳಲ್ಲಿ ಆರು ಅಥವಾ ಎಂಟು ಬಾಲಕರ ದಳಕ್ಕೆ ಪ್ಯಾಟ್ರೋಲ್ ಎಂದು ಹೆಸರು. ಪ್ರತೀ ದಳವೂ ಆಯಾಯ ಸ್ಥಳದ ಹೆಸರನ್ನೂ, ಒಂದು ಸ್ಥಳೀಯ ಪ್ರಾಣಿಯ ಲಾಂಛನವನ್ನೂ ಹೊಂದಿರುತ್ತದೆ. ಪ್ಯಾಟ್ರೋಲ್ ನಾಯಕನಿಗೊಂದು ಪತಾಕೆ ಇದ್ದು, ಅದರ ಎರಡೂ ಕಡೆಗಳಲ್ಲಿ ಆ ಪ್ರಾಣಿಯ ಚಿತ್ರವಿರುತ್ತದೆ. ಬೆಟ್ಟ, ಗುಡ್ಡಗಳಲ್ಲಿ ನಡೆಯುವ ಆಟಗಳಲ್ಲಿ, ಆಯಾಯ ದಳದ ಪ್ರಾಣಿಯ ಕೂಗುಗಳನ್ನು ಅನುಸರಿಸಿ ದಳದ ಸದಸ್ಯರು ತಮ್ಮ ಗುರುತು ಹೇಳಿಕೊಳ್ಳುತ್ತಾರೆ. ರಾತ್ರಿಯ ವೇಳೆಯಲ್ಲಿ ಅವಿತುಕೊಂಡಿರುವಾಗ ಆಯಾಯ ಪ್ಯಾಟ್ರೋಲ್‌ಗಳಿಗೆ ಆಯಾಯ ಪ್ರಾಣಿಯ ಕರೆಗಳ ಮೂಲಕ ಪರಸ್ಪರ ವ್ಯವಹರಿಸುತ್ತಾರೆ. ಇತರ ಪ್ಯಾಟ್ರೋಲ್‌ನವರು ಈ ಕರೆಯನ್ನು ಅನುಸರಿಸುವಂತಿಲ್ಲ. ಇದು ಪ್ರಕೃತಿ ಸಂಬಂಧಿ ವಿಷಯಗಳನ್ನು ಅಧ್ಯಯನ ಮಾಡುವ ದಿಶೆಯಲ್ಲಿ ಮೊದಲ ಹೆಜ್ಜೆಯೂ ಹೌದು. ಪ್ರತೀ ದಳಕ್ಕೂ ಒಂದೊಂದು ಪ್ರಾಣಿಯ ಹೆಸರಿದ್ದಂತೆ ಒಂದೊಂದು ಧ್ಯೇಯವಾಕ್ಯವೂ ಇರುತ್ತದೆ. ಉದಾಹರಣೆಗೆ ಮರಕುಟುಕ ಎಂದರೆ ಹಿರಿಮೆಯೆಂದರೆ ಕಷ್ಟದ ದುಡಿಮೆ ಇತ್ಯಾದಿ.

*****

## ಸ್ಕೌಟಿಂಗ್: ಅಂದು – ಇಂದು

ಬ್ರಿಟಿಷ್ ಆಧಿಪತ್ಯ ತನ್ನ ವಸಾಹತುಗಳನ್ನು ಪ್ರಪಂಚಾದ್ಯಂತ ವಿಸ್ತರಿಸುವ ಸಂದರ್ಭದಲ್ಲಿ ರೂಪುಗೊಂಡ ಸ್ಕೌಟ್‌ನ ನಿಯಮಗಳೂ ಗುಡ್ಡಗಾಡಿನಲ್ಲಿ ಬದುಕುವ ಸೈನಿಕರ ಅನುಕೂಲಕ್ಕಾಗಿ ರೂಪುಗೊಂಡಂತಿವೆ. ಸ್ಕೌಟ್‌ನ ಹೊರಾಂಗಣ ಚಟುವಟಿಕೆಗಳಲ್ಲಿ ಪ್ರಮುಖ ಪಾತ್ರ ವಹಿಸುವ ಶತ್ರುಗಳನ್ನು ಹಿಡಿಯುವ, ಅವರೊಂದಿಗೆ ಯುದ್ಧ ಮಾಡುವ, ಕಳ್ಳರನ್ನು ಹಿಡಿಯುವ, ಎದುರಿಸುವ, ಶತ್ರುಗಳ ನೆಲೆ ಹುಡುಕುವ ಅವರ ಕಣ್ತಪ್ಪಿಸಿ ಹೋಗುವ ಆಟಗಳು ಇದನ್ನೇ ಸೂಚಿಸುತ್ತವೆ.

ಆಧುನಿಕ ಶಸ್ತ್ರಾಸ್ತ್ರಗಳೂ, ಮುಂದುವರಿದ ತಂತ್ರಜ್ಞಾನಗಳೂ ಇಲ್ಲದಿರುವ ಆ ದಿನಗಳಲ್ಲಿ ಸೈನಿಕನೆಂದರೆ ಏಕಾಂಗಿ ವೀರನಾಗಿರುವುದು ಆವಶ್ಯಕವೂ, ಅನಿವಾರ್ಯವೂ ಆಗಿತ್ತು.

ತನ್ನ ಉಡುಪು, ಊಟ, ವಸತಿಗಳನ್ನು ತಾನೇ ನಿರ್ವಹಿಸಿಕೊಂಡು ಬದುಕಿ ಉಳಿಯುವುದಕ್ಕಾಗಿ ಸೂಕ್ತ ತರಬೇತಿಯನ್ನೂ ನೀಡಲಾಗುತ್ತಿತ್ತು.

ಲಂಡನ್‌ನ ಹೊರಭಾಗದ ಬ್ರಿಟಿಷ್ ವಸಾಹತುಗಳಲ್ಲಿ ವಾಸಿಸುತ್ತಿದ್ದ ಬ್ರಿಟಿಷ್ ಸೈನಿಕರಿಗೆ ಅಥವಾ ಸೇನಾಧಿಪತಿಗಳಿಗೆ ಶತ್ರುಭಯ, ಸಾವಿನ ಭಯ ಸದಾ ಕಾಡುತ್ತಿದ್ದುದರಿಂದ ಸದಾ ಎಚ್ಚರವಾಗಿದ್ದು, ಯಾವುದೇ ಕ್ಷಣದಲ್ಲಿ ಸಾವನ್ನು ಎದುರಿಸುವ, ನಿರಂತರವಾಗಿ ಶತ್ರುಗಳನ್ನು ಬೇಟೆಯಾಡುವ ಮನೋಭಾವ ಸಹಜವೇ ಆಗಿತ್ತು. ಲಾರ್ಡ್ ಬೇಡನ್ ಪಾವೆಲ್ ಅವರು ಕೂಡ ತಮ್ಮ ಮೊದಲ ಅನುಭವವನ್ನು ಪುಸ್ತಕ ರೂಪದಲ್ಲಿ ಬರೆದಿರುವುದು ಸೈನಿಕರಿಗಾಗಿಯೇ. ಸೈನಿಕ ಸ್ವತಂತ್ರನಾಗಿ, ಸದಾ ಸನ್ನದ್ಧನಾಗಿ, ಸದೃಢನಾಗಿ ಇದ್ದರೆ ಮಾತ್ರ ಬದುಕುಳಿಯಲು ಸಾಧ್ಯವಾಗಿದ್ದ ಆ ದಿನಗಳಲ್ಲಿ ಅವರ ಪುಸ್ತಕ ಸಂಚಲನ ಉಂಟು ಮಾಡಿದ್ದು ಸಹಜವೇ ಆಗಿದೆ. ಆದರೆ ಕ್ರಮೇಣ ನಿರಂತರ ಯುದ್ಧದ ಅನಿವಾರ್ಯತೆ ಕಡಿಮೆಯಾಗುತ್ತ, ಯುದ್ಧವೂ ಕೆಲವೇ ದೇಶಗಳ ಮಧ್ಯೆ ಕೇಂದ್ರೀಕೃತವಾಗುತ್ತ ಬಂತು. ಆಗ ಬಿಡುಬೀಸಾಗಿ ಬದುಕುವ ಮನೋಭಾವ ಮತ್ತೆ ಮತ್ತೆ ಯುವಕರನ್ನು ಆಲಸಿಗಳನ್ನಾಗಿ ಮಾಡುವ ಅಪಾಯವನ್ನು ತಪ್ಪಿಸಿದ್ದೇ ಸ್ಕೌಟ್.

ಶಾಂತಿಕಾಲದಲ್ಲೂ ಸದಾ ಸನ್ನದ್ಧರಾಗಿ, ಎಚ್ಚರಿಕೆಯ ಮನೋಭಾವದಿಂದ, ಕೆಚ್ಚೆದೆಯಿಂದ ಬದುಕುವಂತೆ ಯುವಜನತೆಯನ್ನು ಎಚ್ಚರಿಸಿದ ಸ್ಕೌಟ್ ನಿಜಕ್ಕೂ ಸ್ತುತ್ಯರ್ಹ. ಆದರೆ ಸ್ಕೌಟ್ ರೂಪಿಸುವ ಸೈನಿಕ ಮನೋಭಾವವನ್ನು ಬದಲಾಯಿಸುವುದು, ಕಾಲದೊಂದಿಗೆ ಬದಲಾಗುವುದು ಅತೀ ಅಗತ್ಯ. ಬ್ರಿಟಿಷ್ ವಸಾಹತುಗಳಲ್ಲಿ ರೂಪುಗೊಂಡ ಈ ಚಟುವಟಿಕೆಯನ್ನು ಸ್ವತಂತ್ರ ದೇಶಗಳ ಅಗತ್ಯಕ್ಕೆ ಅನುಗುಣವಾಗಿ ರೂಪುಗೊಳಿಸುವ ಅವಶ್ಯಕತೆಯೂ ಇದೆ.

ಸ್ಕೌಟ್‌ನ ಮೂಲಭೂತ ನಿಯಮಗಳಲ್ಲಿ ಇದ್ದ ಹಳೆಯ ಕಾರ್ಯ ಚಟುವಟಿಕೆಗಳಲ್ಲಿ ಬಹಳಷ್ಟು ಬದಲಾವಣೆಗಳಾಗಿವೆ. ಮೊದಲು ಇಂಗ್ಲೆಂಡ್‌ನ ಪ್ರಭುತ್ವಕ್ಕೆ ನಿಷ್ಠೆ ಪ್ರಕಟಿಸುತ್ತಿದ್ದ ಸ್ಕೌಟ್ ಪ್ರತಿಜ್ಞೆ ಈಗ ಧರ್ಮ ಅಥವಾ ದೇವರಿಗೆ ನಿಷ್ಠೆ ಪ್ರಕಟಿಸುತ್ತದೆ. ಮೂಲತಃ ಬಾಲಕರಿಗಾಗಿ ರೂಪುಗೊಂಡಿದ್ದ ಸ್ಕೌಟ್‌ನಲ್ಲಿ ಬಹಳ ಬೇಗನೇ ಬಾಲಕಿಯರೂ ಪಾಲ್ಗೊಂಡಿದ್ದಾರೆ. ಆದುದರಿಂದ ಬಾಲಕರ ಸಾಹಸ ಪ್ರವೃತ್ತಿಯ ಹೊರಾಂಗಣ ಚಟುವಟಿಕೆಗಳೊಂದಿಗೆ ಹೆಣ್ಣು ಮಕ್ಕಳಿಗಾಗಿ ಮನೆವಾರ್ತೆಗೆ ಬೇಕಾಗುವ ಕುಸುರಿ ಕಲೆಗಳು, ಮನೆಯ ಒಳಾಂಗಣ ಅಲಂಕಾರ ಮೊದಲಾದ ಸೂಕ್ಷ್ಮತೆಯನ್ನು ಕಲಿಸುವ ಚಟುವಟಿಕೆಗಳೂ ಸೇರಿಕೊಂಡಿವೆ.

ಸ್ಕೌಟ್‌ನಲ್ಲಿ ಹ್ಯಾಮ್ ರೇಡಿಯೋಗೆ ಅವಕಾಶ ದೊರೆತಿದೆ. ಕಾಲಕ್ಕೆ ತಕ್ಕಂತೆ ಪ್ರವೀಣತಾ ಪದಕಕ್ಕಾಗಿ ಕಲಿಯುವ ವಿಷಯಗಳಲ್ಲಿ ಕಂಪ್ಯೂಟರ್‌ಗೆ ಅವಕಾಶ ದೊರೆತಿದೆ. ಆನ್‌ಲೈನ್ ಜಾಂಬೂರಿಗಳಂತಹ ಅತ್ಯಾಧುನಿಕ ಪದ್ಧತಿಯನ್ನು ಅಳವಡಿಸಿಕೊಂಡಿರುವ ಸ್ಕೌಟ್ ಇನ್ನೂ ಅದೇ ಸೆಮಾಫೋರ್ ಮತ್ತು ಮೋರ್ಸ್‌ನಂತಹ ಪುರಾತನ ಸಂಪರ್ಕ ಪದ್ಧತಿಗಳನ್ನು ಮಕ್ಕಳಿಗೆ ಕಲಿಸುತ್ತಿರುವುದು ಅಚ್ಚರಿಯೆನಿಸುತ್ತದೆ.

ಗುಡ್ಡಗಾಡಿನಲ್ಲಿ ಅನುಸರಿಸಬೇಕಾದ ಎಚ್ಚರಿಕೆಗಳು, ಅಲ್ಲಿ ಬದುಕುವ ಬಗೆಗಳು ಮೊದಲಾದವುಗಳ ಬಗ್ಗೆ ಗುಡ್ಡಗಾಡುಗಳನ್ನು ಹುಡುಕಿ ತರಬೇತಿ ನೀಡಬೇಕಾಗಿದೆ. ಅದರ ಬದಲಾಗಿ ಆಧುನೀಕರಣದಿಂದ ಪ್ರಪಂಚ ಎದುರಿಸುತ್ತಿರುವ ಸವಾಲುಗಳು ಮತ್ತು ಅದರ ಪರಿಹಾರಗಳ ಬಗ್ಗೆ ತಿಳುವಳಿಕೆ ಮೂಡಿಸುವಂತಹ ಹೊಸ ಕಲಿಕೆಯನ್ನು ಅಳವಡಿಸಬೇಕಾಗಿದೆ.

ಮರ ಕಡಿಯುವುದು, ಅದಕ್ಕಾಗಿ ಕೊಡಲಿ, ಗರಗಸಗಳನ್ನು ಹೇಗೆ ಬಳಸಬೇಕು, ನದಿ ದಾಟಬೇಕಾದರೆ ನದಿಯ ಆಳ-ಅಗಲಗಳನ್ನು ಹೇಗೆ ಅಂದಾಜಿಸಬೇಕು ಮೊದಲಾದ ಚಟುವಟಿಕೆಗಳು ಈಗ ಔಟ್‌ಡೇಟೆಡ್ ಅನ್ನಿಸಿಕೊಂಡಿವೆ. ಮರ ಕಡಿಯುವುದು ಮತ್ತು ಅವುಗಳಿಗೆ ಸಂಬಂಧಿಸಿದ ಅಸ್ತ್ರಗಳ ಬಳಕೆಯನ್ನು ಕಲಿಸುವುದನ್ನು ನಿಲ್ಲಿಸಲಾಗಿದೆ. ಆದರೆ ಆಧುನಿಕ ಸಮಸ್ಯೆಗಳಾದ ಕಾಂಕ್ರೀಟ್ ಕಾಡುಗಳಿಂದ ಆಗುವ ಕಷ್ಟ-ನಷ್ಟಗಳ ಬಗ್ಗೆ ಮಕ್ಕಳಿಗೆ ಮನವರಿಕೆ ಮಾಡಿಕೊಡುವ ಕಾರ್ಯಕ್ರಮಗಳನ್ನು ಸ್ಕೌಟ್ ಅಳವಡಿಸಿಕೊಳ್ಳಬಹುದು.

ಹಿಂದಿನ ಕಾಲದ ಹುಡುಗರು ಚಡ್ಡಿ ಮತ್ತು ಅಂಗಿ ಧರಿಸಿ ಕವಾಯತು ನಡೆಸುತ್ತಿದ್ದರೆ, ಹೊಸ ಕಾಲದ ಹುಡುಗರು ಸಮವಸ್ತ್ರದ ಚಡ್ಡಿಯ ಬದಲಾಗಿ ಪ್ಯಾಂಟ್ ಧರಿಸುತ್ತಿದ್ದಾರೆ, ಹೆಣ್ಣುಮಕ್ಕಳಿಗಾಗಿದ್ದ ಫ್ರಾಕ್ ಬದಲಾಗಿ, ಸಲ್ವಾರ್ ಕಮೀಜ್ ಬಂದಿದೆ. ಇದರಿಂದಾಗಿ ತೀರ ಸಾಂಪ್ರದಾಯಿಕ ಹಿನ್ನೆಲೆಯಿಂದ ಬರುವ ಹುಡುಗಿಯರಿಗೂ ಸ್ಕೌಟ್‌ನಲ್ಲಿ ಅವಕಾಶ ದೊರೆತಿದೆ.

ಸ್ಕೌಟ್ ಆರಂಭವಾದಾಗಲೇ, ಅದೇ ನಿಯಮವನ್ನು ಅನುಸರಿಸಿ 1908ರಲ್ಲಿಯೇ ಹೆಣ್ಣುಮಕ್ಕಳೂ ಸ್ವ ಇಚ್ಛೆಯಿಂದ ಸ್ಕೌಟ್‌ನಲ್ಲಿ ಪಾಲ್ಗೊಂಡಿದ್ದಾರೆ. ಅಂದಿನಿಂದ ಹೆಣ್ಣುಮಕ್ಕಳಿಗಾಗಿ ಗೈಡ್ ಎಂಬ ಪ್ರತ್ಯೇಕ ಪಡೆ ಇದ್ದರೂ, ಹೆಣ್ಣುಮಕ್ಕಳು ಬಿಡೆಯಿಲ್ಲದೆ ಸ್ಕೌಟ್‌ನ ಚಟುವಟಿಕೆಗಳಲ್ಲಿ ಭಾಗವಹಿಸುತ್ತಿರುವುದು ಸುಮಾರು 80ರ ದಶಕದ ಬಳಿಕವೇ. ಆದುದರಿಂದ ಸ್ಕೌಟ್ ತಮ್ಮ ಹೊರಾಂಗಣ ಚಟುವಟಿಕೆಗಳೊಂದಿಗೆ ಇನ್ನೂ ಜನರಲ್ಲಿ ಹಾಸುಹೊಕ್ಕಾಗಿರುವ ಮೂಢನಂಬಿಕೆಗಳನ್ನು ಹೋಗಲಾಡಿಸುವತ್ತ ಹೆಚ್ಚಿನ ಚಟುವಟಿಕೆಗಳನ್ನು ಹಮ್ಮಿಕೊಳ್ಳಬೇಕಾಗಿದೆ.

ಹಣಕಾಸಿನ ಸಹಾಯವಿಲ್ಲದೆ ಯಾವ ಉತ್ತಮ ಕಾರ್ಯಗಳನ್ನೂ ನಡೆಸಲು ಸಾಧ್ಯವಿಲ್ಲ. ಆದುದರಿಂದ ಸ್ಕೌಟ್ ಸಂಸ್ಥೆಗೂ ಸರಕಾರದಿಂದ ಹೆಚ್ಚಿನ ಸಹಾಯದ ಅವಶ್ಯಕತೆಯಿದೆ.

ಈ ಹಿಂದೆ ಪಟ್ಟಣದ ಮಕ್ಕಳು ಮಾತ್ರ ಸ್ಕೌಟ್ ಅಥವಾ ಗೈಡ್‌ಗಳಾಗಿ ಸೇರುತ್ತಿದ್ದರು. ಈಗ ಹಳ್ಳಿಗಳ ಮಕ್ಕಳೂ ಉತ್ಸಾಹ ತೋರುತ್ತಿದ್ದಾರೆ, ಹೆಚ್ಚಿನ ಸಂಖ್ಯೆಯಲ್ಲಿ ಭಾಗವಹಿಸುತ್ತಿದ್ದಾರೆ, ಎನ್ನುತ್ತಾರೆ ಸ್ಕೌಟ್ಸ್‌ನ ಸಹಾಯಕ ರಾಜ್ಯ ಸಂಘಟನಾ ಆಯುಕ್ತ ಎಂ.ಪ್ರಭಾಕರ ಭಟ್ ಅವರು. 'ನಗರಗಳಲ್ಲಿ ಕೂಡ ಈ ಹಿಂದೆ ಸ್ಕೌಟ್‌ಗಳಿಗೆ ಸೇರಬೇಕಾದರೆ ನಾವು ಮಕ್ಕಳನ್ನು ಒತ್ತಾಯಿಸಬೇಕಾಗಿತ್ತು. ಈಗ ಮಕ್ಕಳೇ ನಾವು ಬರ್ತೇವೆ, ನಾವು ಬರ್ತೇವೆ ಎನ್ನುತ್ತಾರೆ' ಎಂಬ ಅಭಿಪ್ರಾಯ ಕಳೆದ 26 ವರ್ಷಗಳಿಂದ ಸ್ಕೌಟ್ ಮಾಸ್ಟರ್ ಆಗಿರುವ ಶೇಖರ ಪೂಜಾರಿ ಅವರದ್ದು. ಮಕ್ಕಳು ಇಷ್ಟಪಟ್ಟು ಸೇರುವ ಇಂಥ ಸಂಸ್ಥೆಗಳ ಗುಣಮಟ್ಟದ ಬಗ್ಗೆ ಹೆಚ್ಚು ನಿಗಾ ಇಡುವುದು ಅವಶ್ಯಕ.

ರಾಷ್ಟ್ರೀಯ ಏಕತೆಯನ್ನು ಮೂಡಿಸುವ ಚಟುವಟಿಕೆಗಳು ಸ್ಕೌಟ್‌ನಲ್ಲಿದ್ದರೂ ಅಂಥ ಚಟುವಟಿಕೆಗಳನ್ನು ಇನ್ನೂ ಹೆಚ್ಚಿನ ಸಂಖ್ಯೆಯಲ್ಲಿ ಸೇರಿಸಬೇಕಾಗಿದೆ.

ಸ್ಕೌಟ್‌ನ ವಿಶ್ವಪ್ರಜ್ಞೆ, ಸಮಗ್ರತೆ, ಆಧುನಿಕ ಮನೋಭಾವವನ್ನು ಹೊಸಕಾಲದ ಅಗತ್ಯಗಳಿಗೆ ಅನುಗುಣವಾಗಿ ಬದಲಾಯಿಸುವಂತೆ ಸರಕಾರವೂ, ಮಕ್ಕಳ ಹೆತ್ತವರೂ ಗಮನ ಹರಿಸುವುದೂ ಅತೀ ಅಗತ್ಯವಾಗಿದೆ.

*****

## ಬೇಡನ್ ಪಾವೆಲ್: ಸ್ಕೌಟ್ ಜನಕನ ಸಾಹಸಗಾಥೆ



ಸ್ಕೌಟ್‌ನ್ನು ಅರ್ಥ ಮಾಡಿಕೊಳ್ಳಬೇಕಾದರೆ ಇದರ ಸಂಸ್ಥಾಪಕ ಲಾರ್ಡ್ ರಾಬರ್ಟ್ ಸ್ಟೀಫನ್‌ಸನ್ ಸ್ಮಿತ್ ಬೇಡನ್ ಪಾವೆಲ್ (ಬಿ.ಪಿ.) ಆಫ್ ಗಿಲ್‌ವೆಲ್ ಬಗ್ಗೆ ಮೊದಲು ತಿಳಿದುಕೊಳ್ಳಬೇಕು.

ಅವರು ಜನಿಸಿದ್ದು ಇಂಗ್ಲೆಂಡ್‌ನಲ್ಲಿ 1857ರ ಫೆಬ್ರವರಿ 22ರಂದು. ತಂದೆ ಎಚ್.ಜಿ.ಬೇಡನ್ ಪಾವೆಲ್ ಆಕ್ಸ್‌ಫರ್ಡ್‌ನಲ್ಲಿ ಪ್ರೊಫೆಸರ್, ತಾಯಿ ಬ್ರಿಟಿಷ್ ಅಡ್ಮಿರಲ್ ಡಬ್ಲ್ಯು. ಟಿ.ಸ್ಮಿತ್ ಅವರ ಮಗಳು.

ಮೂರು ವರ್ಷವಾಗಿರುವಾಗಲೇ ತಂದೆ ತೀರಿಕೊಂಡರು. ಇದರಿಂದ ಬಾಲ್ಯದಲ್ಲೇ ಅವರು ಸಾಂಸಾರಿಕ ಕಷ್ಟ–ಸುಖ ಎರಡನ್ನೂ ಒಟ್ಟಿಗೇ ಅನುಭವಿಸುವಂತಾಯಿತು.

ಶಾಲಾ ಕಲಿಕೆಯಲ್ಲಿ ಪಾವೆಲ್ ಹೇಳಿಕೊಳ್ಳುವಂಥ ಪ್ರಗತಿ ಸಾಧಿಸಿರದಿದ್ದರೂ, ಪಠ್ಯೇತರ ಚಟುವಟಿಕೆಗಳೆಂದರೆ ಅಲ್ಲಿ ಬಿ.ಪಿ. ಇದ್ದಾರೆಂದೇ ಅರ್ಥ. ಶಾಲೆಯ ಫುಟ್‌ಬಾಲ್ ಟೀಮ್ ಗೋಲ್ ಕೀಪರ್ ಆಗಿಯೂ, ಉತ್ತಮ ನಟ, ಸಂಗೀತಗಾರ, ಚಿತ್ರಕಲಾವಿದನಾಗಿಯೂ, ತುಂಟತನದ, ಉತ್ಸಾಹಭರಿತ ಚಟುವಟಿಕೆಗಳಿಂದ ಸಹಪಾಠಿಗಳಲ್ಲಿ ಪ್ರಸಿದ್ಧರಾಗಿದ್ದರು. ಚಿತ್ರಕಲೆ ಅವರಿಗೆ ಎಷ್ಟು ಒಲಿದಿತ್ತೆಂದರೆ ಅವರ ಮಾತುಗಳೆಲ್ಲವನ್ನೂ ಅವರ ಚಿತ್ರಗಳೇ ಆಡಿ ತೋರಿಸುತ್ತಿದ್ದವು. 19ನೆ ವಯಸ್ಸಿನಲ್ಲಿ ಚಾರ್ಟರ್ ಹೌಸ್‌ನಿಂದ ಪದವಿ ಪಡೆದು, ಬ್ರಿಟಿಷ್ ವಸಾಹತುವಾಗಿದ್ದ ಭಾರತದಲ್ಲಿ ಸಬ್ ಲೆಫ್ಟಿನೆಂಟ್ ಹುದ್ದೆ ನಿರ್ವಹಿಸಲು ಭಾರತಕ್ಕೆ ಆಗಮಿಸಿದರು. ಬ್ರಿಟಿಷರ ಅನೇಕ ಯುದ್ಧಗಳಲ್ಲಿ ಭಾಗವಹಿಸಿ 26ನೆಯ ವಯಸ್ಸಿನಲ್ಲಿಯೇ ಕ್ಯಾಪ್ಟನ್ ಆದರು. ಹೀಗೆ ಯುದ್ಧದಲ್ಲಿ ಪ್ರಾವೀಣ್ಯತೆ ಹೊರಾಂಗಣ ಜೀವನ, ಅವರ ಬದುಕಿನ ಅವಿಭಾಜ್ಯ ಅಂಗವಾಯಿತು.

1887ರಲ್ಲಿ ಬ್ರಿಟಿಷ್ ವಸಾಹತುವಾಗಿದ್ದ ಆಫ್ರಿಕಾದ ಬುಡಕಟ್ಟುಗಳನ್ನು ಮಣಿಸುವ ಸಲುವಾಗಿ ಅವರು ಅಲ್ಲಿಗೆ ತೆರಳಿದರು. ಅಲ್ಲಿ ಅವರು ಪಡೆದ ಯಶಸ್ಸು ಅವರಿಗೆ 1899ರ ವೇಳೆಗೆ ಕರ್ನಲ್ ಬಿರುದನ್ನು ನೀಡಿತು. ಅದೇ ಸಂದರ್ಭದಲ್ಲಿ ದಕ್ಷಿಣ ಆಫ್ರಿಕಾದ ಮಧ್ಯ ಇರುವ ಪ್ರಸಿದ್ಧ ಪಟ್ಟಣ ಮೆಫೆಕಿಂಗ್ ನಗರವನ್ನು ರಕ್ಷಿಸುವ ಹೊಣೆ ಅವರ ಪಾಲಿಗೆ ಬಂತು. 217 ದಿನಗಳ ಸುದೀರ್ಘ ಕಾಲ ನಡೆದ ಯುದ್ಧ ಬ್ರಿಟಿಷರ ಪಾಲಿಗೆ ಮೆಫೆಕಿಂಗ್ ಉಳಿಸಿದ್ದು ಮಾತ್ರವಲ್ಲ, ಅಲ್ಲಿ ಬಿ.ಪಿ. ಅವರು ಅನುಭವಿಸಿದ ಹೊರಾಂಗಣ ಜೀವನ ಸ್ಕೌಟ್ ಹುಟ್ಟಿಗೂ ಕಾರಣವಾಯಿತು.

1901ರಲ್ಲಿ ಅವರು ಗೌರವಗಳ ಮಹಾಪೂರದೊಂದಿಗೆ ಇಂಗ್ಲೆಂಡ್‌ಗೆ ಮರಳಿ ಬಂದರು. ವ್ಯಕ್ತಿಗತ ಜನಪ್ರಿಯತೆಯ ಜೊತೆಗೆ ಎಯ್ಡ್ಸ್ ಟು ಸ್ಕೌಟಿಂಗ್ ಎಂಬ ಸೈನಿಕರಿಗಾಗಿ ಬರೆದ ಪುಸ್ತಕ ಕೂಡ ಅವರಿಗೆ ಜನಪ್ರಿಯತೆಯನ್ನು ತಂದು ಕೊಟ್ಟಿತು. ಅದನ್ನು ಶಾಲೆಗಳಲ್ಲಿ ಪಠ್ಯಪುಸ್ತಕವನ್ನಾಗಿಯೂ ಉಪಯೋಗಿಸಲಾಗುತ್ತಿತ್ತು.



ಈ ಅನುಭವದಿಂದ ಬಿ.ಪಿ.ಯವರು ದೇಶದ ಬಾಲಕರು ಬಲಶಾಲಿ ಪುರುಷರಾಗಿ ಬೆಳೆಯುವ ಅವಶ್ಯಕತೆಯನ್ನು ಮನಗಂಡರು. ಸೈನಿಕರಿಗಾಗಿ ಬರೆದ ಪುಸ್ತಕ ಮಕ್ಕಳ ಮೇಲೆ ಭಾರೀ ಪ್ರಭಾವ ಬೀರಿದ್ದನ್ನು ಗಮನಿಸಿ, ಮಕ್ಕಳಿಗಾಗಿಯೇ ಪುಸ್ತಕವೊಂದನ್ನು ಬರೆಯಲು ಯೋಚಿಸಿದರು.

<u>ಜೂಲು ಬುಡಕಟ್ಟು</u> : ದಕ್ಷಿಣ ಆಫ್ರಿಕಾ ಜೂಲು ಬುಡಕಟ್ಟಿನಲ್ಲಿ ಒಂದು ವಿಚಿತ್ರ ಆಚರಣೆಯಿದೆ. ಆ ಬುಡಕಟ್ಟಿನಲ್ಲಿ 16 ವರ್ಷ ತುಂಬಿದ ಗಂಡು ಮಕ್ಕಳ ಮೈಗೆ ನೈಸರ್ಗಿಕ ಬಿಳಿ ಬಣ್ಣ ಬಳಿದು, ಆತ್ಮರಕ್ಷಣೆಗಾಗಿ ಈಟಿಯನ್ನೂ, ಗುರಾಣಿಯನ್ನೂ ನೀಡಿ ಕಾಡಿಗೆ ಅಟ್ಟುತ್ತಾರೆ. ಆ ಹುಡುಗ ಒಂದು ತಿಂಗಳ ಕಾಲ ನಾಡಿನ ಜನರಿಗೆ ಕಾಣದಂತೆ ಕಾಡಿನಲ್ಲಿ ವಾಸಿಸಬೇಕು. ಅವನು ನಾಡಿಗರ ಕಣ್ಣಿಗೆ ಬಿದ್ದರೆ ಅವನನ್ನು ಅವನ ಜನರೇ ಸಾಯಿಸುತ್ತಿದ್ದರು. ಕಾಡಿನಲ್ಲಿ ಎಚ್ಚರಿಕೆ ತಪ್ಪಿದರೆ ಕಾಡುಪ್ರಾಣಿಗಳಿಗೆ ಆಹಾರವಾಗಬೇಕಾಗಿತ್ತು. ಮೈಗೆ ಬಳಿದ ಬಣ್ಣವನ್ನು ಯಾವುದೇ ಸಾಧನಗಳಿಂದ ಉಜ್ಜಿ ತೆಗೆಯಲು ಸಾಧ್ಯವಾಗುತ್ತಿರಲ್ಲಿಲ್ಲ. ಆದುದರಿಂದ ಅವನು ಅನಿವಾರ್ಯವಾಗಿ ಕಾಡುಪ್ರಾಣಿಗಳನ್ನು ಕೊಂದು ಆಹಾರವನ್ನೂ, ಉಡುಗೆಯನ್ನೂ ಸಂಪಾದಿಸಬೇಕಾಗಿತ್ತು. ಮಳೆ, ಚಳಿಯಿಂದ ಸ್ವರಕ್ಷಣೆ ಮಾಡಿಕೊಳ್ಳಬೇಕು, ಕಾಡಿನ ಗಿಡಗಳಲ್ಲಿ ಉಪಯುಕ್ತ, ವಿಷಯುಕ್ತ ಗಿಡಗಳನ್ನು ಗುರುತಿಸಿ ಒಂದು ತಿಂಗಳ ಕಾಲ ಅಂದರೆ, ಮೈಯ ಬಿಳಿಯ ಬಣ್ಣ ಮರೆಯಾಗುವವರೆಗೆ ಕಾಡಿನಲ್ಲಿ ಜೀವಿಸಬೇಕಾಗಿತ್ತು. ಒಂದು ತಿಂಗಳು ಕಳೆದು ನಾಡಿಗೆ ಆಗಮಿಸುವ ಯುವಕನನ್ನು ಭರ್ಜರಿಯಾಗಿ ಸ್ವಾಗತಿಸಿ, ನಾಡಿನ ಯೋಧರ ಪಡೆಯಲ್ಲಿ ಸೇರಿಸಿಕೊಳ್ಳಲಾಗುತ್ತಿತ್ತು. ಹೀಗಾಗಿ ಜೂಲು ಬುಡಕಟ್ಟಿನ ಸೈನಿಕರನ್ನು ಸೋಲಿಸುವುದು ಬಿ.ಪಿ.ಯವರ ವಿದ್ಯಾವಂತ ನಾಗರಿಕ ಸೈನಿಕರಿಗೆ ಒಂದು ಸವಾಲೇ ಆಗಿತ್ತು. ಈ ಬುಡಕಟ್ಟಿನ ಜನಜೀವನದಿಂದ ಆಯ್ದುಕೊಂಡ ಉತ್ತಮ ಅಂಶಗಳನ್ನು ಸ್ಕೌಟ್‌ನ ನಿಯಮಗಳಲ್ಲಿ ಅಳವಡಿಸಿಕೊಳ್ಳಲಾಗಿದೆ. ಅಂತೆಯೇ ಪ್ರಾಚೀನ ಭಾರತ, ರೆಡ್ ಇಂಡಿಯನ್ನರು ಹಾಗೂ ಇರತ ಬುಡಕಟ್ಟುಗಳ ಜೀವನದ ಆಯ್ದ ಉತ್ತಮ ಅಂಶಗಳೂ ಸ್ಕೌಟ್‌ನಲ್ಲಿ ಸೇರಿವೆ.

ಹೀಗೆ ನಿಧಾನವಾಗಿ, ಸಮಚಿತ್ತದಿಂದ ಬಿ.ಪಿ.ಯವರು ಸ್ಕೌಟಿಂಗ್‌ಗೆ ಒಂದು ರೂಪುಕೊಟ್ಟರು. ಅದನ್ನು ಪರೀಕ್ಷಿಸುವ ಸಲುವಾಗಿ 1907ರ ಬೇಸಿಗೆಯಲ್ಲಿ ಇಂಗ್ಲಿಷ್ ಕಡಲ್ಗಾಲುವೆಯ

ಪಕ್ಕದಲ್ಲಿರುವ ಬ್ರೌನ್ ಸೀ ದ್ವೀಪದಲ್ಲಿ 20 ಬಾಲಕರ ತಂಡಕ್ಕೆ ಮೊದಲ ಬಾರಿಗೆ ಸ್ಕೌಟಿಂಗ್ ಶಿಬಿರ ನಡೆಸಿದರು. ಇದೇ ಮೊದಲ ಸ್ಕೌಟ್ ಶಿಬಿರ.

ಆ ಬಳಿಕ 1908ರಲ್ಲಿ ಪಾಕ್ಷಿಕವೊಂದರಲ್ಲಿ 'ಸ್ಕೌಟಿಂಗ್ ಫಾರ್ ಬಾಯ್ಸ್' ಎಂಬ ಶೀರ್ಷಿಕೆಯಲ್ಲಿ ಆರು ಭಾಗಗಳಲ್ಲಿ ಸ್ಕೌಟ್ ಶಿಕ್ಷಣ ಕೈಪಿಡಿಯನ್ನು ತಮ್ಮದೇ ಚಿತ್ರಗಳೊಂದಿಗೆ ಪ್ರಕಟಿಸಿದರು. ಸ್ಕೌಟಿಂಗ್ ಫಾರ್ ಬಾಯ್ಸ್ ಪುಸ್ತಕವು ಪಾಕ್ಷಿಕ ಪುರವಣಿಯಾಗಿ ಹೊರಬೀಳುತ್ತಿದ್ದಂತೆಯೇ ಬ್ರಿಟಿಷ್ ದ್ವೀಪಗಳಾದ್ಯಂತ ಸ್ಕೌಟ್ ಪಟಾಲಾಮ್‌ಗಳು ಸಾವಿರಾರು ಸಂಖ್ಯೆಯಲ್ಲಿ ಆರಂಭವಾದವು. ಪುಸ್ತಕದ ಆರನೆಯ ಹಾಗೂ ಕೊನೆಯ ಭಾಗ ಹೊರಬಿದ್ದ 1908 ಮಾರ್ಚ್ ವೇಳೆಗೂ ಇಡೀ ಸಂಯುಕ್ತ ರಾಜ್ಯಗಳಲ್ಲೂ, ಕೆನಡಾ, ನ್ಯೂಜಿಲ್ಯಾಂಡ್‌ಗಳಲ್ಲೂ ಸ್ಕೌಟ್ ಪಡೆಗಳು ಆರಂಭವಾದವು. ಈ ಹಿನ್ನೆಲೆಯಲ್ಲಿ ಮಾಹಿತಿಗಾಗಿ ದಿ ಸ್ಕೌಟ್ ವಾರಪತ್ರಿಕೆಯನ್ನು ಆರಂಭಿಸಿದಾಗ, ಅದು ವೇಗವರ್ಧಕದಂತೆ ಕೆಲಸ ಮಾಡಿ ಬಿ.ಪಿ.ಯವರ ಕೆಲಸವನ್ನು ಹಗುರಗೊಳಿಸಿತು.

ಯುದ್ಧ ಮಾಡುವುದಕ್ಕಾಗಿ ಶಿಕ್ಷಣ ನೀಡುವುದ ಕ್ಕಿಂತಲೂ, ಮುಂದಿನ ಪೀಳಿಗೆ ಉತ್ತಮ ಪೌರರಾಗಿ ಬಾಳಲು ಶಿಕ್ಷಣ ನೀಡುವುದೇ ಹೆಚ್ಚಿನ ದೇಶಸೇವೆ ಎಂದು ಮನಗಂಡು, ಸೈನ್ಯದ ಲೆಫ್ಟಿನೆಂಟ್ ಜನರಲ್ ಹುದ್ದೆಯನ್ನು ತ್ಯಜಿಸಿ, ಸ್ಕೌಟಿಂಗ್ ಮೂಲಕ ಸೇವಾ ಜೀವನವನ್ನು ಆರಂಭಿಸಿದರು. ಬಳಿಕ ವಿಶ್ವಪರ್ಯಟನೆ ಕೈಗೊಂಡು ಸ್ಕೌಟಿಂಗ್‌ನ್ನು ಪ್ರಪಂಚಾದ್ಯಂತ ಬೆಳೆಸಿದರು. 1920ರಲ್ಲಿ ಲಂಡನ್‌ನಲ್ಲಿ ಮೊದಲ ವಿಶ್ವ ಜಾಂಬೋರಿ (ಸ್ಕೌಟ್ ಸಮ್ಮೇಳನ) ನಡೆಯಿತು. ಈ ಸಂದರ್ಭದಲ್ಲಿ ಬಿ.ಪಿ. ಅವರನ್ನು ವಿಶ್ವದ ಪರಮ ಪ್ರಧಾನ ಸ್ಕೌಟ್ (ಚೀಫ್ ಸ್ಕೌಟ್ ಆಫ್ ವರ್ಲ್ಡ್) ಎಂದು ಘೋಷಿಸಲಾಯಿತು. ಬಳಿಕ ಸ್ಕೌಟ್‌ನ 21ನೆಯ ವರ್ಷಾಚರಣೆಯ ಸಂದರ್ಭದಲ್ಲಿ ಇಂಗ್ಲೆಂಡ್‌ನ ರಾಜ ಐದನೆಯ ಜಾರ್ಜ್ ಅವರು ಬಿ.ಪಿ. ಅವರಿಗೆ ಬ್ಯಾರನ್ ಪದವಿ ನೀಡಿದರು. ಅಂದಿನಿಂದ ಬಿ.ಪಿ. ಅವರು ಲಾರ್ಡ್ ಬೇಡನ್ ಪಾವೆಲ್ ಆಫ್ ಗಿಲ್‌ವಿಲ್ ಆದರು. ಅವರು ನಿಧನರಾದಾಗ 84 ವರ್ಷ ವಯಸ್ಸು.



'ಬ್ರೌನ್ ಸೀ' ದ್ವೀಪದ ನೋಟ.

ಇಂದು ಪ್ರಪಂಚದ 216 ರಾಷ್ಟ್ರಗಳು ಮತ್ತು ಪ್ರಾಂತ್ಯಗಳಲ್ಲಿ 28 ಲಕ್ಷಕ್ಕೂ ಹೆಚ್ಚು ಜನರು ಸ್ಕೌಟ್–ಗೈಡ್ ವಾಹಿನಿಗೆ ಸೇರಿದ್ದಾರೆ. ಸ್ತ್ರೀ–ಪುರುಷ ಭೇದವಿಲ್ಲದೆ ಈ ಚಳವಳಿಯಲ್ಲಿ ಸೇವೆ ಸಲ್ಲಿಸುತ್ತಿದ್ದಾರೆ. ವಿಶ್ವದ 151 ದೇಶಗಳಲ್ಲಿ ಅಂತಾರಾಷ್ಟ್ರೀಯ ಮನ್ನಣೆ ಪಡೆದ ರಾಷ್ಟ್ರೀಯ ಸ್ಕೌಟ್ ಸಂಸ್ಥೆಗಳಿವೆ. ಆಫ್ರಿಕಾ, ಅರಬ್ ರಾಷ್ಟ್ರ, ಏಷಿಯಾ ಪೆಸಿಫಿಕ್, ಯುರೇಷಿಯಾ, ಯುರೋಪಿಯನ್ ಮತ್ತು ಅಂತರ ಅಮೆರಿಕಾ ಹೀಗೆ ಆರು ವಿಶ್ವಸ್ಕೌಟ್ ವಲಯಗಳೂ, ಆಫ್ರಿಕಾ, ಅರಬ್, ಏಷಿಯಾ ಪೆಸಿಫಿಕ್, ಯುರೋಪ್ ಮತ್ತು ಪಶ್ಚಿಮಾರ್ಧಗೋಳ ಎಂಬ ಆರು ಗೈಡ್ ವಲಯಗಳೂ ಇವೆ.




ಪರಿಸರದಿಂದ ದೊರೆಯುವ ವಸ್ತುಗಳನ್ನೇ ಉಪಯೋಗಿಸಿ ಸುಲಭವಾಗಿ ನಿತ್ಯದ ಬದುಕಿನಲ್ಲಿ ಎದುರಾಗುವ ಸವಾಲುಗಳನ್ನು ಎದುರಿಸಲು ತರಬೇತಿ ನೀಡುವುದರಿಂದ ಮಕ್ಕಳ ಮುಂದಿನ ಜೀವನಕ್ಕೂ ಅದು ಉಪಯುಕ್ತ. ಉದಾಹರಣೆಗೆ ಹಗ್ಗದ ವಿವಿಧ ಉಪಯೋಗಗಳ ತರಬೇತಿಯಲ್ಲಿ ಹಗ್ಗಗಳಿಂದ ವಿವಿಧ ಗಂಟುಗಳನ್ನು ಕುಣಿಕೆಗಳನ್ನು ಹಾಕುವುದನ್ನು ಕಲಿಸಿಕೊಡಲಾಗುತ್ತದೆ. ಇದು ಸ್ಕೌಟ್‌ನ ಚಟುವಟಿಕೆಗಳಿಗೆ ಅನುಕೂಲವಾಗುವಂತೆ ಇದ್ದರೂ, ನಾಗರಿಕ ಬದುಕಿನಲ್ಲಿ ಬಟ್ಟೆ ಒಣಗಿಸಲು ಹಗ್ಗ ಕಟ್ಟುವುದು, ಮೊಸರಿನ ಗಡಿಗೆ ತೂಗು ಹಾಕಲು ಕುಣಿಕೆ ಮಾಡುವುದು, ಯಾವುದಾದರೂ ವಸ್ತುವನ್ನು ಸೂಕ್ತವಾಗಿ ಪೊಟ್ಟಣ ಕಟ್ಟುವುದು, ಹಳ್ಳ, ತಗ್ಗುಗಳಿಂದ ಭಾರವಾದ ವಸ್ತುಗಳನ್ನು ಎತ್ತುವುದು, ಅಕಸ್ಮಾತ್ತಾಗಿ ಬಾವಿಗೆ ಬಿದ್ದವರನ್ನು ಮೇಲೆತ್ತುವುದನ್ನು, ಅಗ್ನಿ ದುರಂತಗಳಿಂದ ರಕ್ಷಿಸುವುದು... ಹೀಗೆ ಹಲವು ರೀತಿಯಲ್ಲಿ ಉಪಯುಕ್ತ.




'ಬ್ರೌನ್ ಸೀ' ದ್ವೀಪದಲ್ಲಿ ನಡೆಸಿದ ಪ್ರಾಯೋಗಿಕ ಶಿಬಿರದ ಸ್ಮಾರಕ ಶಿಲೆ.

# SCOUTING a training for life

**SARDAR LAKSHMAN SINGH**
Former National Commissioner


sea scout

There is not much in our world of growing automation that would automatically make the boys and girls fit for life, rather present day push button way of living encourages them to become soft and increasingly dependant.

The parents wish their children to grow up physically fit, mentally alert and morally straight, but have they been actively helping them to be that; if so, they must have found that not so easy ! It is a common knowledge that it takes hard planning, a push and a tactful urging to get a child into action. Unfortunately so many things tend to minimizes the 'do' instinct in the youngsters' world to today. the motion picture, the radio, the television, the automatic record changer, the larger use of automobiles all minimize the need to "do".

"Doing" is creativity and creativity is development. It is also a fact that in spite of the traditional dislike of "School" and "Work" young people want to know, to learn and to do. It is built-in and instinctive in them. Curiosity motivates them and they are out to find out answers to many of their puzzles themselves.

Exploring, discovery and learning experience help satisfy the "doing instinct". The feeling of achievement makes all that effort worthwhile. Working on a project is always fun mixed with a lot of activity and adventure.

If we want our youngsters to be developed into healthy, happy, useful personalities, it is very necessary to put them through activities that go promote and build up the necessary qualities. Such activities should appear more as a game or fun than a hard unattractive routine.

Scouting / Guiding can do that for any child. Its approach and methods continue to click. Its approach and methods continue to click. the programme is popular with youngster and the youth alike.

Through its outdoor activities such as hiking, camping, nature rambles, rock climbing, swimming canoeing and participation in vigorous competitions and field sports they start appreciating health-care, games played in gangs as disciplined teams called patrols indoors as well as outdoors.

All these are their regular group activities carried on in Bulbul Flock, Cub Packs of 6 to 10 age group, Guide Companies, Scout Troops of 10 to 17 and above.

If we had a chance to go through the proficiency badges' list we would find a large number of them that are related to physical fitness. the whole advancement methodology seeks to help the individual child achieve a sound mind in a sound body.

Youngsters wish to do things and do them a lively company. Scout method fully ensures that. As a youngster comes to join the Movement, he is put in a small unit of those of his age. He is one of the gang-a small homogenous group. Patrol System in Scouting is not merely a technique of organising a group into convenient, efficient groups for games and activities but a unique method of active training 'for and in' leadership.

As they learn skills, they develop hobbies which besides making them handy and useful at home and in schools fills their spare time keeping them away from undesirable company and occupation. Proficiency badge programme offers a very wide range of interests catering to varied tastes and aptitudes.

Even a dull or a backward child finds some activity or the other at which he could make a good show. He works at that and is

helped to retain his self-respect and gain self-confidence.

Adventure is the salt of life-God's greatest gift to mankind. The spirit of adventure is instilled into everyone of us from the very birth.

The child is ever exploring its surroundings on a voyage of discovery. "Outing" in Scouting satisfies this inborn need. Youths' mind and energy is thus directed towards the right channel.

Boyhood/girlhood, is generally the time of high idealism and of eagerness to be of service. "Daily Good Turns" is the common creed of Scouts and Guides all over the world.

When a Scout enters a burning hut to save someone in danger, he takes all possible precautions and goes ahead to help, not moved by any idea of a reward but led spontaneously by the spirit imbibed through Scout Law and Promise.

One of the outstanding contributions that Scouting has made to the youth of any country, is the opportunity it provides for "SERVICE TO THE COMMUNITY".

The movement can and does make the youth of to-day fit for tomorrow both in the home and outside in the increasingly disturbed world. The parents, the people and the State have to lend a hand to enable it to reach larger number.



"Baden-Powell treating the boys to a camp fire yarn at the second Scout camp at Humshaugh, Northumberland, in 1909."

***"Fun, fighting, and feeding! These are the three indispensable elements of the boy's world***

# SOCIETY, EDUCATION & SCOUTING

**Dr. S. KUMAR**
Former Director, Bharat Scouts & Guides, New Delhi

Society is a broad term covering all kinds of non-government organisations, including free and non-profit-making associations, cultural, religious, trade unions etc. Society is a bridge between the family and the state and is comprised of the people who join hand with each other, formally or non-formally, for promoting good of the people.

The state, through the Government, is potent factor is moulding different kinds of policies for one section or all the sections of the society. Sometimes, there is a great role assigned to the state through the Government to fashion the destiny of the people.

Education is one where the element of coordination and formulation of policies at the level of the states comes in. It needs to be emphasised that education is the main instrument to enable the people, especially young people, to face the challenges of life facilitating ain alleviation of scars like poverty and ill-health. It was in no less absolute terms that is was mentioned in the "Statement on the Education of Young People" that "education is a life long process, which enables the continuous development of a person's capability as an individual and as a member of society". Under this broad framework, education is based on four pillars. These are : learning to know: learning to do; learning to live together; and learning to be Psychologically speaking all the three aspects in a person, conative, cognitive and aesthetic are covered by these pillars. Now the question is about the building up and development of personality of an individual on the basis of these pillars. Formal education, a hierarchical structure, is that system which can provide knowledge and job skills enabling the individual to be a bread earner. Informal education is that process which facilitates an individual to imbibe attitudes, values and skills from day to day experiences and from agencies like family friends, media etc.

The above discussion makes it evident that formal education tends to teach more and more but educates less and less. Informal education, in this age of consumerism with everything but the value of nothing. No-formal education, as a complement to formal schooling and informal education, serve as a specific tool and system, to educate to teach and to foster value education. The UNESCO has emphasised time and again that all the three aspects of education, i.e., formal, informal and non-formal, are the most effective tools a society possesses to confront the challenges rendering the youth capacitated to find new solutions to make his life sublime in the service of the society.

**Scouting,** for obvious reasons, falls in the category of non-formal education and should be supported by the Government, society and family mainly due to the following reasons:

1. **Scouting** generates education in values in a more useful and lasting manner.
2. Scouting provides mostly the peergroup programmes without any discrimination, especially during adolescent period.
3. Scouting stimulates development of citizenship by concrete action through camping life based on Promise and Law as propounded by Lord B.P.

The Bharat Scouts and Guide, just to ttake an instance, make an endeavour to function as a catalytic instrument mostly through its training programmes and group competitions.

**Training Programmes:**

A youth, just after getting inducted into Scouting, has to undergo several activities and programmes. Pratham Sopan, Dwitiya Sopan, Tritiya Sopan and Rajya Puraskar, besides earning several Proficiency Badges are some of the training programmes which



# ಮರಿಗಳ (ಕಬ್) ಶಿಕ್ಷಣ

ಎಲ್.ಟಿ. ಲೋಕೇಶ್
ಪ್ರಭಾರಿ. ರಾಜ್ಯ ತರಬೇತಿ ಆಯುಕ್ತರು ( ಸ್ಕೌಟ್)

ಸ್ಕೌಟ್ ಶಿಕ್ಷಣದ ಮೂಲ ತಳಹದಿಯೇ ಮರಿಗಳ ಶಿಕ್ಷಣ. ಸ್ಕೌಟ್ ಶಿಕ್ಷಣವನ್ನು ಪ್ರಾರಂಭಿಸಿದ ಲಾರ್ಡ್ ಬೇಡನ್ ಪೊವೆಲ್‌ರವರು 10 ವರ್ಷದ ಒಳಗಿನ ಯುವ ಸಮೂಹ ತಮ್ಮ ಹಿರಿಯ ಸಹೋದರರ ಜೊತೆಯಲ್ಲಿ ಸ್ಕೌಟ್ ಟ್ರೂಫ್‌ನಲ್ಲಿ ಸೇರಿಕೊಂಡು ಸ್ಕೌಟ್‌ಗಳ ಜೊತೆ ಅನೇಕ ಚಟುವಟಿಕೆಗಳಲ್ಲಿ ತೊಡಗಿ ಸದಾ ಸಂತೋಷದಿಂದ ಕಾಳ ಕಳೆಯುತ್ತಿರುವುದನ್ನು ಗಮನಿಸಿದರು. ನಂತರ ಜ್ಞಾನಿಗಳ ಸಲಹೆ ಪಡೆದು 5 ರಿಂದ 10 ವರ್ಷದ ಮಕ್ಕಳಿಗೆ ಸ್ಕೌಟಿಂಗ್‌ನ ಚಟುವಟಿಕೆಯಲ್ಲಿ ತೊಡಗಿಸಿಕೊಳ್ಳಲು ಯೋಜನೆ ಹಾಕಿದರು.

ಬೇಡನ್ ಪೊವೆಲ್‌ರು 1913 ರಲ್ಲಿ ಕಿರಿಯ ಯುವಕರ ಕಾರ್ಯಕ್ರಮದ ಬಗ್ಗೆ ಅಧ್ಯಯನ ಮಾಡಿ ಯುವಕರಲ್ಲಿ ಅತ್ಯಂತ ಕಿರಿಯವರಾದ ಜೂನಿಯರ್ ಸ್ಕೌಟ್‌ಗಳಿಗೆ (ಕಬ್‌ಗಳಿಗೆ) ಒಂದು ನಿಯಮವನ್ನು ರಚಿಸಿದರು. ಆದರೆ ಜೂನಿಯರ್ ಸ್ಕೌಟ್ಸ್ ಎಂಬ ಪದವನ್ನು ಪರಿಗಣಿಸಿರಲಿಲ್ಲ. ಮೊದಲು ಬಿ. ಪಿ ರವರು Wolf cubs ಅಥವಾ **CUBS** ಅಥವಾ ಯಂಗ್ ಸ್ಕೌಟ್‌ಗಳಿಗೆ 1914 ನೇ ಜನವರಿಯಲ್ಲಿ ಇನ್ನೊಂದು ನಿಯಮವನ್ನು ಹೆಡಕ್ವಾಟ್ರಸ್ ಗೆಜೆಟ್ಟಿನಲ್ಲಿ ಪ್ರಕಟಿಸಿದರು.

10 ವರ್ಷದ ಒಳಗಿನ ಮಕ್ಕಳಲ್ಲಿ ವಿಶೇಷ ಚಟುವಟಿಕೆಗಳಲ್ಲಿ ತೊಡಗಿಸಿ ಅವರ ಕೌಶಲ್ಯಗಳನ್ನು ಜ್ಞಾನ ಮತ್ತು ಬುದ್ಧಿ ಮಟ್ಟವನ್ನು ಹೆಚ್ಚಿಸಿಕೊಳ್ಳುವಂತಹ ಚಟುವಟಿಕೆಗಳಲ್ಲಿ ತೊಡಗಿಸಬೇಕಾದ ಸಂದರ್ಭದಲ್ಲಿ ಅವರಿಗೆ ತನ್ನ ಆಪ್ತ ಸ್ನೇಹಿತರು ಹಾಗೂ ಖ್ಯಾತ ಕಥೆ ಬರಹಗಾರರು ಆದ " ರುಡ್ ಯಾರ್ಡ್ ಕಿಪ್ಲಿಂಗ್" ಅವರ " ಜಂಗಲ್ ಬುಕ್ " ವನ್ನು ಆಧರಿಸಿ ಮೌಗ್ಲಿ ಕಥೆಯ ಮೂಲಕ ಕಬ್ಬಿಂಗ್ ಶಿಕ್ಷಣವನ್ನು ಪ್ರಾರಂಭಿಸಲು ಸಹಾಯ ಮಾಡಬೇಕೆಂದು ಕೋರಿದರು. ರುಡ್ ಯಾರ್ಡ್ ಕಿಪ್ಲಿಂಗ್ ರವರ " ಕಾಡು ಕಥೆಗಳು " ಆಧಾರದಿಂದ ಮರಿಗಳ ಶಿಕ್ಷಣವನ್ನು ರೂಪಿಸಿದರು.

ನಂತರ Wolf cub's Handbook" ಪುಸ್ತಕವನ್ನು B.P. ರವರು ಮರಿಗಳಿಗಾಗಿ 2ನೇ ಡಿಸಂಬರ್ 1916 ರಲ್ಲಿ ಪ್ರಕಟಿಸಿದರು.

ಕಬ್ ಮಾಸ್ಟರ್‌ಗಳಾಗಿ ತರಬೇತಿ ಪಡೆದಿರುವ ಶಿಕ್ಷಕ–ಶಿಕ್ಷಕಿಯರು ತಮ್ಮ ಶಿಕ್ಷಣ ಸಂಸ್ಥೆಗಳಲ್ಲಿ 5 ರಿಂದ 10 ವರ್ಷದ ಬಾಲಕರನ್ನು 12 ರಿಂದ 24 ಸಂಖ್ಯೆಯಲ್ಲಿ ಆರಿಸಿ. ಅವರಿಗೆ ವಿವಿಧ ಆಟಗಳು, ಹಾಡುಗಳು, ಅಭಿನಯ ಗೀತೆಗಳು, ಹಾಡು ಕುಣಿತಗಳ ಮೂಲಕ ಸಂಬಂಧಿಸಿದ ಶಿಕ್ಷಣವನ್ನು ನೀಡಬೇಕು. ಆರಂಭಿಕರಿಗೆ (ರಿಕ್ರೂಟ್ಸ್) ಎಂದು ಕರೆಯುತ್ತಾರೆ. ಇವರ ಸಮೂಹಕ್ಕೆ : ಕಬ್ ಪ್ಯಾಕ್ " ( ಮರಿಗಳ ಹಿಂಡು ) ಎಂದು ಕರೆಯುತ್ತಾರೆ. ಅವರಲ್ಲಿ ನಾಯಕತ್ವದ ಗುಣ ಬೆಳೆಸುವ ಸಲುವಾಗಿ 4 ರಿಂದ 6 ಮಂದಿ ಇರುವ ಸಣ್ಣ ಗುಂಪುಗಳಾಗಿ (ಸಿಕ್ಸ್) ವಿಂಗಡಿಸಿ ಒಂದೊಂದು ಬಣ್ಣದ ಹೆಸರನ್ನು ನೀಡಲಾಗುತ್ತದೆ.

ಕಬ್ ಪ್ಯಾಕ್‌ಗೆ ( ಮರಿಗಳ ಹಿಂಡು) ಸೇರಿದ ಬಾಲಕರು ವಿವಿಧ ಚಟುವಟಿಕೆಯೊಂದಿಗೆ, ದೈಹಿಕವಾಗಿ, ಮಾನಸಿಕವಾಗಿ, ಬೌದ್ಧಿಕವಾಗಿ ಪ್ರಗತಿ ಹೊಂದಲು ಮತ್ತು ಕೌಶಲ್ಯಗಳನ್ನು ಬೆಳೆಸಿಕೊಳ್ಳಲು ಅವರು ವಿವಿಧ ಪ್ರಾವೀಣ್ಯತಾ ಪದಕಗಳನ್ನು ಪಡೆದುಕೊಂಡು ಹಿಂಡಿನಲ್ಲಿ ಮುನ್ನಡೆಯಲು ಪ್ರಗತಿ ಪರ ಶಿಕ್ಷಣವನ್ನು ಯೋಜಿಸಲಾಗಿದೆ.

ಮರಿಗಳ ಶಿಕ್ಷಣದಲ್ಲಿ ಆರಂಭಿಕರಾಗಿ ಸೇರಿದ ಬಾಲಕರು ಕಾಡಿನ ಕಥೆ, ಮರಿಯ ನಿಯಮ ಮತ್ತು ಪ್ರತಿಜ್ಞೆ, ವಂದನೆ ಹಸ್ತ ಲಾಘವ, ಧ್ಯೇಯವಾಕ್ಯ, ಘನ ವಂದನೆ, ದಿನಕ್ಕೊಂದು ಉಪಕಾರ, ದೇವತಾ ಪ್ರಾರ್ಥನೆಗಳನ್ನು ಸರಿಯಾಗಿ ಅರಿತು ನಿತ್ಯ ಜೀವನದಲ್ಲಿ ಮಾಡಬೇಕು.

**ಕಬ್ಬಿಂಗ್ ಶಿಕ್ಷಣದಿಂದ ಬಾಲಕರಿಗೆ ಆಗುವ ಪ್ರಯೋಜನಗಳು**

1. ಮರಿಗಳ (ಕಬ್ಬಿಂಗ್) ಶಿಕ್ಷಣದಿಂದ ಬಾಲಕರಿಗೆ ಒಳ್ಳೆಯ ಸ್ನೇಹಿತರು ದೊರಕುವರು.
2. ಕಬ್ಬಿಂಗ್ ಶಿಕ್ಷಣದಿಂದ ಮನೆಯಲ್ಲಿ /ಇತರ ಕಡೆಗಳಲ್ಲಿ ದಿನಕ್ಕೊಂದು ಉಪಕಾರ ಮಾಡುವುದನ್ನು ಕಲಿತುಕೊಳ್ಳುತ್ತಾನೆ.
3. ತನ್ನಲ್ಲಿ ಇರುವ ಪ್ರತಿಭೆಗಳನ್ನು / ಕೌಶಲ್ಯತೆಗಳನ್ನು ಪ್ರದರ್ಶಿಸಲು ಉಪಯುಕ್ತವಾಗಿದೆ.
4. ಮರಿಗಳ ಶಿಕ್ಷಣದಿಂದ ಬಾಲಕನನ್ನು ಆರೋಗ್ಯ ವಂತನನ್ನಾಗಿ ಮಾಡುತ್ತದೆ.
5. ಸ್ವಾವಲಂಬಿಯಾಗಲು ಕಲಿಯುತ್ತಾನೆ
6. "ಕೈಲಾದಷ್ಟು ಸಾಧಿಸುತ್ತೇನೆ" ಎಂಬ ಧ್ಯೇಯ ವಾಕ್ಯದಂತೆ ಮಾಡುವ ಪ್ರತಿ ಕೆಲಸದಲ್ಲಿ ಅವರ ಶಕ್ತ್ಯಾನುಸಾರ ಸಾಧಿಸಲು ಮುಂದೆ ಬರುತ್ತಾರೆ.

**"The sport is Scouting is to find the good in every boy and develop it."**

# ಸ್ಕೌಟಿಂಗ್-ಗೈಡಿಂಗ್

## ಮೃದು ಕೌಶಲ್ಯಗಳ ಆಗರ

ಯು. ಗೋಪಾಲಕೃಷ್ಣಭಟ್, ಎಲ್.ಟಿ (ಸ್ಕೌಟ್ಸ್)

ಬದಲಾಗುತ್ತಿರುವ ವಿಶ್ವ ಸಮಾಜ, ಎಳೆಯ ಪೀಳಿಗೆಯ ಕಡೆಗೆ ಇರುವ ಕಾಠಿಣ್ಯತೆಯನ್ನು ತೊಡೆದು ಮೃದುತ್ವದ ಸ್ಪರ್ಶ ನೀಡಲು ಸರ್ವಪ್ರಯತ್ನ ಮಾಡುತ್ತದೆ. ಹಲವಾರು ದೇಶಗಳಲ್ಲಿ ತಮ್ಮ ಮಕ್ಕಳಿಗೇ ಆದರೂ, ಪೋಷಕರು ದೈಹಿಕ ಹಿಂಸೆಯನ್ನಾಗಲೀ, ಮಾತು, ಅಭಿವ್ಯಕ್ತಿಯ ಗದರಿಕೆಯನ್ನಾಗಲೀ ಮಾಡುವುದು ಶಿಕ್ಷಾರ್ಹ ಅಪರಾಧವೆಂದು ಪರಿಗಣಿಸಿ ದಶಕಗಳೇ ಸಂದಿವೆ. ಭಾರತ ಸರಕಾರವೂ ಈ ನಿಟ್ಟಿನಲ್ಲಿ ಹೆಜ್ಜೆಯನ್ನು ಮುಂದಿಟ್ಟಿದೆ.

ಕಾಠಿಣ್ಯ ರಹಿತ, ಆತ್ಮೀಯತೆಯ, ಸೌಮ್ಯತೆಯ, ಮನವೊಲಿಸುವ ಮೃದುಗುಣಗಳ ಬಗ್ಗೆ ಚಿಂತಿಸುವಾಗ, ತನ್ನಿಂತಾನೇ 'ಸ್ಕೌಟಿಂಗ್ – ಗೈಡಿಂಗ್ ವಿಧಾನ' ಮನಸ್ಸಿನ ಮುಂದೆ ಬರುತ್ತದೆ. 107 ವರ್ಷಗಳ ಹಿಂದೆ ಎಳೆಯರ ಒಂದು ಪುಟ್ಟ ಸಂಡವನ್ನು ಎಂಟು ದಿನಗಳ ಕಾಲ ಶಿಬಿರದಲ್ಲಿ ಸಹಜೀವನಕ್ಕೆ ತೆರೆದಿಟ್ಟಾಗ, ಅಥವಾ ಆ ಬಳಿಕ ತಮ್ಮ ಮಿಲಿಟರಿ ಜೀವನದ ದೀರ್ಘ ಅನುಭವದ ಅಡಿಪಾಯದ ಮೇಲೆ, ಕಿರು ಅವಧಿಯ ಈ ಮಕ್ಕಳ ಶಿಬಿರದ ಸಮಗ್ರ ಕಾರ್ಯಕ್ರಮವನ್ನು ಹರಡಿದ ನೆನಪನ್ನೇ ಲೇಖನ ಮಾಲೆಯಾಗಿ ಬರೆದಾಗ ಆ ಮಹಾನುಭಾವ, ಮೇಜರ್ ಜನರಲ್ ರಾಬರ್ಟ್ ಸ್ಟೀಫನ್‌ಸನ್ ಸ್ಮಿತ್ ಬೇಡೆನ್-ಪೋವೆಲ್ – ಒತ್ತು ಕೊಟ್ಟದ್ದು ಮಿಲಿಟರಿತನಕ್ಕಲ್ಲ (Regimentality) ಮೃದುಕೌಶಲ್ಯಕ್ಕೆ ಮೃದು ಕೌಶಲ್ಯಗಳಿಗೆ (Soft Skills)

ಸ್ಕೌಟಿಂಗ್-ಗೈಡಿಂಗ್‌ನ ಹೆಚ್ಚಿನೆಲ್ಲ ಚಟುವಟಿಕೆಗಳ ಅಂತರ್ಯದಲ್ಲಿ ಇಂತಹ ಗುಣವನ್ನು ನಾವು ಕಾಣಬಹುದು. ಬೆಳಗ್ಗಿನ ವ್ಯಾಯಾಮ ಮಾಡುವಾಗ ಬಿ.ಪಿ. ಯವರು 'ಸಾಮೂಹಿಕ ಕವಾಯತು' ಎಂಬ ಅನುಭವ ಬರುವಂತೆ ಅದನ್ನು 'Drill by command' ಆಗಿ ಹೇರಲಿಲ್ಲ. ಅವರು ಉಪಯೋಗಿಸಿದ ಶಬ್ದಗಳ – 'ನಿಧಾನವಾಗಿ ಉಸಿರಾಡು; ನಿನ್ನದೇ ಸಮಯವನ್ನು ತೆಗೆದುಕೋ; ದೈಹಿಕ ಆರೋಗ್ಯಕಾಪಾಡಲು, ಕಾರ್ಯಕ್ಷಮತೆಯನ್ನು ಹೆಚ್ಚಿಸಲು ವ್ಯಾಯಾಮವನ್ನು ಹೇಳಿಕೊಟ್ಟರೇ ಹೊರತು ಕವಾಯತು ಪ್ರದರ್ಶನಕ್ಕಾಗಿ ಅಲ್ಲ.

ಪ್ರತಿಜ್ಞೆಯ ವಿಚಾರದಲ್ಲಾದರೂ ಅಷ್ಟೆ ; 'ತಾನರಿತು, ತನ್ನ ಅಂತರಂಗದ ಪ್ರೇರಣೆಯನುಸಾರ, ದೇವರಿಗೆ – ದೇಶಕ್ಕೆ ಕರ್ತವ್ಯವನ್ನು ಸಲ್ಲಿಸಬೇಕು' ಎಂಬ ಮನವೊಲಿಕೆಯ ದೃಷ್ಟಿಕೋನದಿಂದಲೇ ಅವರು 'ನನ್ನ ಗೌರವ ಸಾಕ್ಷಿಯಾಗಿ' ಎಂಬ ಪದ ಪ್ರಯೋಗ ಮಾಡಿರಬೇಕು. ಇತರರನ್ನು ಮೆಚ್ಚಿಸಲು ಆದರೆ ಅದು 'ಮಿಲಿಟರಿ ಹೇರಿಕೆ' ಯಾಗುತ್ತದೆ. ತನ್ನ ಮನವೊಪ್ಪಿ ಮಾಡುವಕ್ರಿಯೆ ಎಂದೂ ಕಠಿಣವಲ್ಲ. ನಿಯಮದ ಪ್ರತಿ ಅಂಶದಲ್ಲಿಯೂ ಈ ಭಾವವನ್ನು ಯಾರೂ ಗುರುತಿಸಬಹುದು. ವಿಶ್ವಸಾರ್ಹತೆ, ಪರಿಸರಪ್ರೇಮ, ಇತರರ ಬಗ್ಗೆ ಕಾಳಜಿ, ಸಹೋದರತ್ವ, ಪ್ರಾಣಿದಯೇ, ತ್ರಿಕರಣ ಶುದ್ಧಿ ಮುಂತಾದ ಶಬ್ದಗಳೇ ಎಲ್ಲರಿಗೂ ಪ್ರಿಯವಾಗುತ್ತದೆ. 'ಸ್ಕೌಟ್ ಶಿಸ್ತಿನವನು' ಎಂದು ಹೇಳುವುದರ ಜೊತೆಗೇ ಅಶಿಸ್ತು ಸಮಾಜದ ಸೊತ್ತಿನ ಸಂರಕ್ಷಣೆಗಾಗಿ ಎಂಬ ಸೂಚನೆಯನ್ನು ನೀಡುವ ಮೂಲಕ – ಅದೂ ಪ್ರದರ್ಶನ ಚಟುವಟಿಕೆಯಲ್ಲಿ ಎಂದೇ ತಿಳಿಸಲಾಗುತ್ತದೆ.

ಒಬ್ಬ ಸ್ಕೌಟ್ ಅಥವಾ ಗೈಡ್ ಪಡೆಯಬಹುದಾದ ಅನುಭವದ ಕಲಿಕೆಗಳಾದರು ಎಂತಹವು! ನಿತ್ಯಜೀವನಕ್ಕೆ ಬೇಕಾದ ಕೌಶಲ್ಯಗಳು ಅವು. ಪ್ರಥಮ ಚಿಕಿತ್ಸೆ ಅಂದಾಜಿಸುವಿಕೆ, ಶಿಬಿರೋಪಕರಣ ತಯಾರಿ, ಸುಧಾರಿತ ಡೇರೆ ತಯಾರಿ, ಸಂದೇಶ ವಾಹಕ, ಪಟಾಲಂ ಹೊರಸಂಚಾರ – ಮುಂತಾದ ಕಾರ್ಯಕ್ರಮಗಳು – ತನ್ನೊಬ್ಬನ ಸಾಧನೆ, ತಾನೇ ಬುದ್ಧಿವಂತ ಎಂಬ ಭಾವನೆಯ ಬದಲು – ಸಾಮಾಜಿಕ ಬದ್ಧತೆ. ಉಪಯುಕ್ತತೆ, ಸಾಂಘಿಕ ಸಾಧನೆಯನ್ನು ಒಡಮೂಡಿಸಿ ಸ್ವಾರ್ಥದ ಕಾಠಿಣ್ಯದ ಬದಲು ಸಾಮೂಹಿಕತೆಯ ಹಿತಕರ ಭಾವನೆಯನ್ನು ಬೆಳೆಸುತ್ತದೆ. ಇದು ಮೃದುತನದ ಪರೋಕ್ಷ ಅಳವಡಿಕೆಯೇ ಆಗಿದೆ.

ಸ್ಕೌಟಿಂಗ್-ಗೈಡಿಂಗ್ ತ್ರಿವಿಧ ಶಾಖೆಗಳಲ್ಲಿ ಹೇಳಲಾದ ಧ್ಯೇಯ ವಾಕ್ಯಗಳಾದರೂ ಹಾಗೆಯೇ – ಸದಾಸಿದ್ಧರು (ಪರೋಪಕಾರಕ್ಕಾಗಿ!) ನೀವೇ ಸಾಧಿಸಿ (ಉತ್ತಮವಾದುದನ್ನು!) ಸೇವೆ ಇತರರಿಗೆ; ಮಿಲಿಟರಿತನದ (Regimentality) ಶಬ್ದಗಳಲ್ಲಿ; ಹೃದಯವಂತಿಕೆ ತೋರಿಸುವ ಸಾಮಾಜಿಕ ಗುಣಗಳು. ನಮ್ಮ ಶಿಬಿರಾಗ್ನಿ ಕಾರ್ಯಕ್ರಮವನ್ನು ಸಂಸ್ಥಾಪಕರು 'ಆಜ್ಞೆಯ' (by command) ಮೂಲಕ ನಡೆಸಲಿಲ್ಲ. ಕ್ರೌರ್ಯ-ಕಾಠಿಣ್ಯತೆಯ ಭಯಾನಕ ಭೀಭತ್ಸ ರಸಗಳಿಗೆ ಅವಕಾಶವಿಲ್ಲ. ಸಂಘಟನೆಯ, ಪರೋಪಕಾರ, ಸದ್ಗುಣ ಪ್ರತಿಪಾದನೆಯ ಸಾಧನೆಯ ದ್ಯೋತಕ ಚಟುವಟಿಕೆಗಳನ್ನೇ – ತೆಳುಹಾಸ್ಯದ – ಲಘುಮನೋರಂಜನೆಯ ಕಾರ್ಯಕ್ರಮಗಳಾಗಿ ಮೂಡಿಸುವ ಮೂಲಕ, ಎಲ್ಲರನ್ನು ಪಾಲ್ಗೊಳ್ಳುವಂತೆ ಮಾಡುವ ಮೂಲಕ ಹೃದಯ ಸ್ಪರ್ಶಿಯಾಗಿಸಿದರು.

ಯಾವುದು ಮಿಲಿಟರಿತನದ ಶಿಸ್ತು ಮೂಡಿಸುವ

ಕಾರ್ಯಕ್ರಮವೋ ಅದು ಕೇವಲ ದೈಹಿಕ ತರಬೇತಿ.ಆಗುತ್ತದೆ. ಮನಸ್ಸು ಅದನ್ನು ವಿರೋಧಿಸುತ್ತಾ ಅಥವಾ ಅದರ ಕಾಠಿಣ್ಯತೆಯನ್ನೇ ಮನಸ್ಸಿಗೂ ಅಳವಡಿಸುತ್ತ - ಜೀವನದ ಸಂತೋಷವನ್ನು ತಾನೂ ಅನುಭವಿಸಲಾರದ, ತನ್ನೊಂದಿಗೆ ಇರುವವರು ಸಂತೋಷವಾಗಿರಲು ಬಿಡದ ಸ್ಥಿತಿಯಲ್ಲಿರುತ್ತದೆ. ಪರ್ಯಾಯವಾಗಿ, ಯಾವ ಕಲಿಕೆಯು ಸ್ವಂತ ಆಸಕ್ತಿಯಿಂದ, ಸ್ವಯಂ ತಿಳುವಳಿಕೆಯಿಂದ, ಭಾವನಾ ಪೂರ್ವಕವಾಗಿರುತ್ತದೋ ಅದು ತನ್ನನ್ನೂ ತನ್ನೊಂದಿಗಿರುವವರನ್ನು ಆನಂದ ಸ್ಥಿತಿಗೆ ಒಯ್ಯುತ್ತದೆ.

ಇಂದು ಒಬ್ಬ ಏಳೋ ಎಂಟೋ ವಯಸ್ಸಿನ ಮಗು ಅಪ್ಪ ಹೊಸದಾಗಿ ತಂದ 'ಸ್ಮಾರ್ಟ್ ಫೋನ್' ನಲ್ಲಿ ಏನೇನು ಹೊಸ ಕಾರ್ಯಕ್ರಮವನ್ನು ಮಾಡಬಹುದೆಂದು ತಾನೇ ಕಲಿತು ಮನೆಯಲ್ಲಿ ತಾತನಿಗೋ, ಅಮ್ಮನಿಗೋ ಅದನ್ನು ತೋರಿಸುವಾಗ ಅಥವಾ ಅವರಿಗೂ 'ಕಲಿಸಿ' ಕೊಡುವಾಗ -ಆ ಮಗುವಿನ ಕಣ್ಣಿನಲ್ಲಿ ಗುರುತಿಸಬಹುದಾದ ಹೊಳಪನ್ನು, ಸಾಧನೆಯ ಸಾರ್ಥಕವನ್ನು - ಅದೇ ತಾನೇ C.E.T. ಯಲ್ಲಿ ಪ್ರಥಮ ರ್‍ಯಾಂಕ್ ಪಡೆದ ವಿದ್ಯಾರ್ಥಿ-ಆ ಫಲಿತಾಂಶವನ್ನು ಅಂತರ್ಜಾಲದಲ್ಲಿ ನೋಡಿ-ತನ್ನ ಅಪ್ಪ-ಅಮ್ಮನಿಗೆ ತಿಳಿಸುವಾಗ ಇರುವ ಮುಖಭಾವದಲ್ಲಿ ಕಾಣಬಹುದೇ? ಸರ್ವಥಾ ಸಾಧ್ಯವಿಲ್ಲ! ಆ ಪುಟ್ಟ ಮಗುವಿನ ಕಲಿಕೆ-ಆನಂದದ ಕಲಿಕೆ (Pleasure learning) ಆಗಿತ್ತು. ಆದರೆ P.U.C. ವಿದ್ಯಾರ್ಥಿಯದ್ದು ಒತ್ತಡ ಕಲಿಕೆ (Pressure learning) ಒತ್ತಡ ಕೌಟುಂಬಿಕ ಮೂಲದ್ದಾಗಿರಬಹುದು, ಅಥವಾ ತನ್ನದೇ ಆಗಿರಬಹುದು. ಒತ್ತಡ ಕಲಿಕೆಯಿಂದ ಬಂದ ಸಂತೋಷ ಕ್ಷಣಿಕ. ಏಕೆಂದರೆ ಮರುಕ್ಷಣದಿಂದ ಮುಂದಿನ ಓದಿನ - ಪರೀಕ್ಷೆಯ ಒತ್ತಡ ಆರಂಭವಾಗುತ್ತದೆ.

ಬಿ.ಪಿ. ಯವರು ತೋರಿಸಿಕೊಟ್ಟ ಸ್ಕೌಟಿಂಗ್-ಗೈಡಿಂಗ್ ವಿಧಾನ ಆನಂದದ ಕಲಿಕೆಯದ್ದು. ಅದು ಮೃದು ಕೌಶಲ್ಯಗಳ ಸಾಗರ. ಅವರು ಪರೀಕ್ಷೆ - ಫಲಿತಾಂಶಗಳೆಂಬ ಒತ್ತಡದ ವಾತಾವರಣವನ್ನು ಮೂಡಿಸಲೇ ಇಲ್ಲ. ಆದ್ದರಿಂದಲೇ ಸ್ಕೌಟಿಂಗ್-ಗೈಡಿಂಗ್ ದೇಹಕ್ಕೆ ತರಬೇತಿಯಲ್ಲ; ಮೆದುಳಿಗೆ ಸತ್ ಚಿಂತನೆಯನ್ನು, ಹೃದಯಕ್ಕೆ ಭಾವನೆಯ ಸ್ಪರ್ಶ ನೀಡುವ ಜೀವನಕ್ರಮ. ಸ್ಕೌಟಿಂಗ್-ಗೈಡಿಂಗ್ ಎಂಬುದು ಮಾಹಿತಿಯ ಪುಸ್ತಕವಲ್ಲ; ನಡತೆ ರೂಪಿಸುವ ಕಾರ್ಖಾನೆಯಲ್ಲಿ; ಪರಿವರ್ತನೆಯ ಒಡನಾಟವಾಗಿದೆ.

Scouting is not 'INFORMATION; it is not 'FORMATION' it is a life of TRANSFORMATION.

# YOUTH

Youth is not entirely a time of life. It is a state of mind. It is not wholly a matter of ripe cheeks, red lips or supple knees. It is a temper of the will, a quality of the imagination, a vigour of the emotions, a freshness of the deep springs of life. It means a temperamental predominance of courage over timidity, or an appetite for adventure over love of ease.

Nobody grows old merely by living a number of years, people grow old by deserting their ideals. Years may wrinkle the skin, but to give up interest wrinkles the soul. Worry doubt, self-distrust, fear and despair - these are the long, long years that bow the head and turn the growing spirit back to dust.

Whatever your years, there is in every being's heart, the love of wonder, challenge of events, the unfailing childlike appetite for what next the joy and the game of life. You are as young as the faith, as young as your hope, as old, as your despair. In the central place of every heart there is a recording chamber, so long as it received messages of beauty, cheer, and courage. so long are you young.

When the wires are all down, and your heart is covered with the snows of pessimism, and the ice of cynicism, then and then only are you grown old.

Courtesy: Scouter's Five- Scoutopedia



# ದೈಹಿಕ ಮತ್ತು ಮಾನಸಿಕ ಸ್ವಾಸ್ಥ್ಯಕ್ಕೆ ಸ್ಕೌಟಿಂಗ್–ಗೈಡಿಂಗ್

ಕಮಲಾಕ್ಷಿ ಹೆಗಡೆ

ದೇಹ ಮತ್ತು ಮನಸ್ಸು ರೈಲು ಹಳಿಗಳಿದ್ದಂತೆ. ಸಮಾನಾಂತರದ ಎರಡು ಹಳಿಗಳ ಮೇಲೆ ರೈಲು ಸರಾಗವಾಗಿ ಚಲಿಸುವಂತೆ ಶರೀರ ಮತ್ತು ಮನಸ್ಸೆಂಬ ಹಳಿಗಳ ಮೇಲೆ ಸ್ವಾಸ್ಥ್ಯ ಜೀವನ ರೈಲು ಕ್ರಮಿಸುವಲ್ಲಿ ಸಂಶಯವೇ ಇಲ್ಲ. ಹಾಗಿದ್ದರೆ ಈ ರೈಲಿನ ಓಟಕ್ಕೆ ಇಂಧನ ಬೇಡವೇ ? ಎಂದು ಶಂಕಿಸಿದರೆ ಅದಕ್ಕೆ ಉತ್ತರ ಇಲ್ಲಿದೆ. ಆ ಇಂಧನ ಶಕ್ತಿಯೇ ಸ್ಕೌಟಿಂಗ್ ಮತ್ತು ಗೈಡಿಂಗ್.

ಅದೆಂತಹ ಆಯಸ್ಕಾಂತ ಗುರುತ್ವಾಕರ್ಷಣೆ ಸ್ಕೌಟಿಂಗ್ – ಗೈಡಿಂಗ್‌ನಲ್ಲಿ ಇದೆ ಎಂದುಕೊಳ್ಳದಿರಿ. ಸ್ವಾಸ್ಥ್ಯ ಶರೀರ ಮತ್ತು ಮನಗಳಿಗೆ ಬೇಕಾಗುವ ಜ್ಞಾನ, ವಿಜ್ಞಾನ, ಶಿಸ್ತು, ವ್ಯಾಯಾಮ, ಯೋಗ, ಆಟ, ಊಟ, ಓಟ, ದೇಹ ಶುಚಿತ್ವ, ಸಮ ತೋಲನ ಆಹಾರ, ಸಂಚಾರ, ಕಲೆ, ಸಾಂಸ್ಕೃತಿಕ ಚಟುವಟಿಕೆ, ಪ್ರಕೃತಿ ನೋಟ, ಸಾಹಸ, ಭಾವೈಕ್ಯತೆ, ದೇಶವಿದೇಶಗಳ ಜನಜೀವನಗಳ ತಿಳಿವು ಸಾಗರಸದೃಶವಾದುದು. ಮೊಗೆಮೊಗೆದಷ್ಟು ನೂರ್ಮಡಿಯಾಗುವಂತಹುದು. ಜ್ಞಾನದ ಉದ್ದ ಅಗಲ ಆಳ ಅಳವಿಗೆ ನಿಲುಕದ್ದು. ಅರಿವಿಗೆ ಸಿಗದದ್ದು. ಎಲ್ಲಾ ವಯೋಮಾನದವರಿಗೂ ಇದರಲ್ಲಿ ಇಂಬಿದೆ. ಆದರ್ಶ ಬದುಕಿದೆ. ಅಗಣಿತಮೌಲ್ಯಗಳಿವೆ. ಸ್ಕೌಟಿಂಗ್ ಗೈಡಿಂಗ್ ನಮ್ಮೆಲ್ಲರ ಬದುಕಿಗೆ ಆಧಾರ ! ದೃಢತೆಗೆ ಆಕರ ! ಸಂತಸಕ್ಕೆ ಸಾಕಾರ.

ಮಕ್ಕಳ ಶರೀರ ಮತ್ತು ಮನಸ್ಸು ಅತೀ ಕೋಮಲವಾದದ್ದು. ಅದರಲ್ಲೂ ಇಂದಿನ ಅತಿವೇಗದ ಬದುಕು ಮಕ್ಕಳನ್ನು ಯಂತ್ರವನ್ನಾಗಿಸುತ್ತಿದೆ. ಭಾವನೆಗಳು ಭಸ್ಮವಾಗುತ್ತಿವೆ. ಅವರ ಮುಂದಿರುವ ಸವಾಲುಗಳೆಂದರೆ ಶಾಲೆಗೆ ಹೋಗುವುದು ಮನೆಗೆಲಸ (Home Work) ಮಾಡುವುದು, ಗೃಹಪಾಠಗಳಿಗೆ ಓಡುವುದು, ಪರೀಕ್ಷೆಗೆ ಸಿದ್ಧರಾಗುವುದು, ಕಡಿಮೆ ಅಂಕ ಬಂದರೆ ನೊಂದುಕೊಳ್ಳುವುದು, ತಂದೆತಾಯಿ ಪೋಷಕರ ಬಿರುನುಡಿಗೆ ಬೇಸರ ಪಡುವುದು, ಬದುಕಿನಲ್ಲಿ ನಿರಾಸಕ್ತಿ ತೋರುವುದು, ಭಾವೋದ್ವೇಗಗಳಿಗೆ ಒಳಗಾಗುವುದು, ಖಿನ್ನತೆ, ಭಯ, ಬೇಡದ ಶಂಕೆಗೆ ಒಳಗಾಗುವುದು. ಎಲ್ಲಿದೆ ಸುಂದರ ಬಾಲ್ಯ ? ಅಡಕತ್ತಿರಿಯಲ್ಲಿ ಸಿಕ್ಕಿದ ಅಡಕೆಯಂತೆ, ರೆಕ್ಕೆ ಕತ್ತರಿಸಿದ ಹಕ್ಕಿಯಂತೆ, ಅಸಹಾಯಕ ಬದುಕನ್ನು ಎಷ್ಟು ದೂರ ನಡೆಸಲಾದೀತು ? ಬೆಳೆಯುವ ಚಿಗುರನ್ನು ಚಿವುಟಿ, ನಾವು ನವ ಸಮಾಜವನ್ನು ಕಟ್ಟುತ್ತಿದ್ದೇವೆ. ಆದರೆ ಇಂತಹ ಪರಿಸರ ಹಿತಕಾರಿಯಲ್ಲ. ಮಕ್ಕಳು ಒಂದು ದೇಶದ ಶ್ರೇಷ್ಠವಾದ ಸಂಪತ್ತು. ಭೂಲೋಕದ ಹೊಳೆಯುವ ನಕ್ಷತ್ರಗಳು. ಆ ಮಕ್ಕಳ ಸರ್ವಾಂಗೀಣ ಬೆಳವಣಿಗೆಗೆ ಉತ್ತಮ ಬುನಾದಿಬೇಕು. ಕಟ್ಟಡಕ್ಕೆ ಸುಭದ್ರ ತಳಪಾಯವಿದ್ದಂತೆ. ಅಂತಹ, ಸಂಚಲನ ಶಕ್ತಿಯೇ ಸ್ಕೌಟಿಂಗ್ – ಗೈಡಿಂಗ್. ಈ ಸ್ಕೌಟಿಂಗ್ ಮತ್ತು ಗೈಡಿಂಗ್ ಸ್ವಾಸ್ಥ್ಯ ಬದುಕಿಗೆ ಹೇಗೆ ಪೂರಕವೆಂಬುದನ್ನು ಕೆಲವು ನಿದರ್ಶನಗಳ ಮೂಲಕ ಪುಷ್ಟೀಕರಿಸಬಹುದು.

ಒಮ್ಮೆ ಕೆಲವು ಸ್ಕೌಟ್ – ಗೈಡ್‌ಗಳು ದೊಡ್ಡ ಬೆಟ್ಟವೇರುವ ಸಾಹಸವನ್ನು ಕೈಗೊಂಡರು 'ಆರಂಭ ಶೂರತ್ವ ಎಂಬಂತೆ!' ಆರಂಭದಲ್ಲಿ ಹುರುಪೋ ಹುರುಪು. ನಾನು ಮುಂದೆ ತಾನು ಮುಂದೆ ಎಂದು ಬೆಟ್ಟ ಹತ್ತಲು ಓಡಿದ್ದೇ ಓಡಿದ್ದು. ಸ್ಪರ್ಧಾತ್ಮಕ ಉಮೇದು ಬೇರೆ. ಬೆಟ್ಟದ ಮೇಲೆ ಮೇಲೆ ಏರುತ್ತಾ ಸಾಗಿದಂತೆ, ಬಿಸಿಲಿನ ಧಗೆಗೆ ಮೈಯೊಡ್ಡಿ ನಡೆದು ಒಂದೊಂದು ಗುಂಪಾಗಿ ಬಂಡೆಗಲ್ಲಿನ ಮಧ್ಯೆ ಗುಂಡಕಲ್ಲಾಗಿ ಉಸ್ಸಪ್ಪಾ ಎಂದು ಕುಳಿತೇ ಬಿಟ್ಟರು. ಏಳಲೇ ಇಲ್ಲ. ದಳನಾಯಕ / ನಾಯಕಿಯರ ಪಾಡನ್ನು ಕೇಳ ಬೇಕೆ ? ಅವರೂ ಸ್ವಲ್ಪ ವಿಶ್ರಮಿಸಿ, ನಂತರ ಮಕ್ಕಳಿಗೆ ಉತ್ಸಾಹ ತುಂಬುತ್ತಾ, ಹುರಿದುಂಬಿಸುತ್ತಾ ಬಿ.ಪಿ. ರವರ ನುಡಿ **'Be prepared'** ಸದಾಸಿದ್ಧರಾಗಿ, ಅಸಾಧ್ಯ ವಾದುದೆಲ್ಲವೂ ಸಾಧ್ಯ' ಎಂದು ಸ್ಫೂರ್ತಿ ತುಂಬುತ್ತಾ ಕುಳಿತ ಮಕ್ಕಳನ್ನು ಎಬ್ಬಿಸಿಯೇ ಬಿಟ್ಟರು. ಮತ್ತೆ ಬೆಟ್ಟ ಏರುವ ಮರುಸಾಹಸ. ಮುಗ್ಗರಿಸುತ್ತ, ಏಳುತ್ತಾ ಬೀಳುತ್ತಾ, ಕೋಲೂರಿಕೊಳ್ಳುತ್ತಾ ಆರೋಹಣ ಕಾರ್ಯ ಆಯಾಸದಿಂದಲೇ ಸಾಗಿತ್ತು, ಹಾಗೂ ಹೀಗೂ ಶರೀರ ಮತ್ತು ಮನಸ್ಸು ಒಂದಾಗಿ ಬೆಟ್ಟದ ತುದಿಯನ್ನು ಸೇರಿದ್ಯಾಯ್ತು. ಆಗ ನೋಡಬೇಕಿತ್ತು ಆ ಮಕ್ಕಳ ಹರ್ಷೋದ್ಗಾರ, ನಗೆ – ಕುಣಿತ, ಭಾವಾವೇಶ, ಸಂತಸ ವರ್ಣಿಸಲಸದಳ ! " ನಾನೇ ಹಿಲೇರಿ, ನಾನೇ ತೇನ್ ಸಿಂಗ್, ನಾನೇ ಅರುಣಿಮಾ" ಎಂಬ ಹೆಮ್ಮೆಯ ಮುಖಭಾವ ನೋಡಿದವರ ಮನಸ್ಸನ್ನು ಮುಗ್ಧಗೊಳಿಸುತ್ತಿತ್ತು. ಎಲ್ಲರ ಮುಖದಲ್ಲೂ ನಗು ಲಾಸ್ಯವಾಡುತ್ತಿತ್ತು. ಅದೆಂತಹ ಮಧುರ ಕ್ಷಣ! ಅದೇ ಸ್ಕೌಟ್ – ಗೈಡ್ಸ್‌ನ ಸದೃಢ ಪ್ರೇರಣಾ ಶಕ್ತಿ, ಸ್ವಸ್ಥ್ಯತೆಯ ಕಾರಂಜಿ.

ಇನ್ನೊಂದು ಸಂದರ್ಭ–ಮರೆಯಲಾಗದಂತಹುದು. ಒಬ್ಬ ಗೈಡ್ ಮೊಟ್ಟಮೊದಲ ಶಿಬಿರವಾಸದಲ್ಲಿ ಪಾಲ್ಗೊಂಡಿದ್ದಳು. ಆಧುನಿಕ ಸೌಕರ್ಯಗಳು ಹೆಚ್ಚಿಗೆ ಇಲ್ಲದ, ಕಾಡಿನ ನಡುವೆ ಬಿಡಾರಗಳಲ್ಲಿ ಉಳಿಯುವ ಸುವ್ಯವಸ್ಥಿತ ಶಿಬಿರವಾಸವಾಗಿತ್ತು. ಆ ಗೈಡ್‌ಗೆ ಈ ವಾತಾವರಣ ಹೊಸತು. ಹಾಗೂ ನವ್ಯ ಸೌಕರ್ಯಗಳನ್ನು ಹೊಂದಿದ್ದ ಕುಟುಂಬದ ಹಿನ್ನೆಲೆಯವಳು. ಸಂಜೆಯಹೊತ್ತು ತನ್ನ ಟೆಂಟ್ (ಬಿಡಾರ) ನ ಮುಂದೆ ಕುಳಿತು ಒಂದೇ ಸಮನೆ ಅಳುತ್ತಿದ್ದಳು. ತಾನು ಎಣಿಸಿದ ಸೌಕರ್ಯಗಳು ಅಲ್ಲಿ ಇರದ ಕಾರಣ ಕೂಡಲೇ ಮನೆಗೆ ಹೋಗುವುದಾಗಿ ಹಠಹಿಡಿದಳು. ಆ ಸಮಯದಲ್ಲಿ ನಾನು ಆಕೆಯ ಬಳಿ ಹೋಗಿ ಕೂಲಂಕಷವಾಗಿ ಅವಳ ಮನದ ಇಂಗಿತವನ್ನು ತಿಳಿದು ನಂತರ ಸಾಕಷ್ಟು ತಿಳಿಹೇಳಿದೆ ಶಿಬಿರವಾಸದ ಪ್ರಯೋಜನ, ಚಟುವಟಿಕೆಗಳು. ಸಹ ಜೀವನ, ಸ್ನೇಹ ಪರಿಸರ, ಮನೋರಂಜನೆ ಕಾರ್ಯಕ್ರಮಗಳ ಕುರಿತು ಮನವರಿಕೆ ಮಾಡಿದೆ. ಇದೊಂದು ರಾತ್ರಿ ಕಳೆದ ಮೇಲೆ ನಾಳೆ ಅವಳ ಇಚ್ಛೆ ಹೇಗೋ ನೋಡೋಣ ಎಂದೆ **OK** ಎಂದು ಹೇಳಿದಳಷ್ಟೆ. ಮಾರನೇದಿನ ನನ್ನನ್ನು ಕಂಡದ್ದೇ ಓಡಿ ಬಳಿ ಬಂದು **Thank You Mam** ಎನ್ನುತ್ತಾ ತನ್ನ ಸಂತಸವನ್ನು

ಅನಿಸಿಕೆಗಳನ್ನು ಹಂಚಿಕೊಂಡಳು. ತಾನು ಪೂರ್ಣ ಶಿಬಿರವಾಸ ಮುಗಿಸಿಯೇ ಮನೆಗೆ ಹೋಗುವುವಾಗಿ ಆಶ್ವಾಸನೆ ನೀಡಿದಳು. ಇದೆಂತಹ ಮನಃ ಪರಿವರ್ತನೆ ! ಸದೃಡತೆಗೆ ಸಾಕ್ಷಿಯಲ್ಲವೇ ?

ಮತ್ತೊಂದು ಮನಮಿಡಿದ ಸಂಗತಿ. ಶಿಬಿರವಾಸ ನಡೆಯುತ್ತಿತ್ತು. ಎರಡನೆಯ ದಿನದಂದು ಮಧ್ಯರಾತ್ರಿ ಸುಮಾರು 1.30 ಗಂಟೆಗೆ ಒಬ್ಬ ಗೈಡ್‌ಗೆ ಜರ ಹೆಚ್ಚಾಗಿ, ಕೂಡಲೇ ಆಸ್ಪತ್ರೆಗೆ ಕರೆದುಕೊಂಡು ಹೋಗುವ ನಿರ್ಧಾರ, ಗಡಿಬಿಡಿ, ಗಾಬರಿ ವಾತಾವರಣ ಆ ಶಿಬಿರವಾಸದಿಂದ ಆಸ್ಪತ್ರೆಯು ಸುಮಾರು 5 ಕಿ.ಮೀ. ದೂರದಲ್ಲಿತ್ತು ಕೂಡಲೇ ಶಿಬಿರ ಸೇವಾಕಾರ್ಯಕರ್ತರಿಗೆ ಫೋನ್ ಮಾಡಿದಾಗ ಒಂದೆರಡು ನಿಮಿಷಗಳಲ್ಲಿ ಕಾರು ರೆಡೀ. ಆ ಕಾಯಿಲೆಯ ಹುಡುಗಿಯ ಜೊತೆಗೆ ನಾನು ಮತ್ತು ಮತ್ತೊಬ್ಬ ಹುಡುಗಿಯೊಂದಿಗೆ ಆಸ್ಪತ್ರೆಗೆ ಹೋದೆವು. ಸಕಾಲದಲ್ಲಿ ಚಿಕಿತ್ಸೆ ಪಡೆದು, ವೈದ್ಯರ ಅಭಿಪ್ರಾಯದ ಮೇರೆಗೆ ಮರಳಿ ಶಿಬಿರಕ್ಕೆ ವಾಪಾಸಾಗುವುದೆಂದು ನಿಶ್ಚಯಿಸಿದೆವು. ದಾರಿ ಮಧ್ಯದಲ್ಲಿ ಕಾರು ಓಡಿಸುತ್ತಿದ್ದ ಸೇವಾ ಕಾರ್ಯಕರ್ತನ ಸೇವೆಯನ್ನು ಶ್ಲಾಘಿಸಿದೆ. ಆತನು ಮುಗುಳ್ನಕ್ಕು ಮೇಡಂ...... "ನಾನೊಬ್ಬ ಕಂಪನಿ ಮಾಲೀಕ ಹಿಂದೆ ಸ್ಕೌಟ್ ಆಗಿದ್ದವನು. ನನ್ನ ಬಾಲ್ಯದ ಸ್ಕೌಟ್ ದಿನಗಳು, ಶಿಬಿರವಾಸ, ಎಲ್ಲವೂ ಇನ್ನೂ ಮನದಲ್ಲಿ ಹಸಿರಾಗಿದೆ. ನನ್ನ ಕಂಪನಿ, ಹಣ, ಕಾರು, ಬಂಗಲೆಗಳೆಲ್ಲವೂ ಕೊಡುವ ಸಂತೋಷಕ್ಕಿಂತಲೂ ಮಿಗಿಲಾದ ಸಂತಸ, ಆನಂದವನ್ನು ಈ ಸೇವೆಯಲ್ಲಿ ಕಂಡುಕೊಂಡಿದ್ದೇನೆ. ಈ ಮಕ್ಕಳ ನಡುವೆ ನಾನು ಮಕ್ಕಳ ಸಂತಸ ಪಡೆಯುತ್ತೇನೆ. ಹಾಗಾಗಿ ಕೆಲವು ಶಿಬಿರಗಳಿಗೆ ಬಂದು ನನ್ನ ಕೈಲಾದ ಸೇವೆ, ಸಹಾಯವನ್ನು ಮಾಡುತ್ತೇನೆ " ಎಂದನು. ಅಬ್ಬ..... ಇದೆಂತಹ ಅದ್ಭುತ ಮನಸ್ಸು ಹಾಗಾದರೆ ಶರೀರ ಮತ್ತು ಮನಸ್ಸಿಗೆ ಬೇಕಾಗುವ ಟಾನಿಕೇ ಬೇರೆಯಲ್ಲವೇ? ಎಂದುಕೊಳ್ಳುತ್ತಾ ಆತನ ನುಡಿಗಳನ್ನು ಮತ್ತೊಮ್ಮೆ ಮೆಲುಕುಹಾಕಿದೆ.

ಇದುವೇ ಸ್ಕೌಟ್ - ಗೈಡ್ಸ್ ಮಹತ್ವ ದೇಹ ಮತ್ತು ಮನಸ್ಸನ್ನು ಒಂದಾಗಿ ಸ್ವಾಸ್ಥ್ಯತೆಯತ್ತ ಕೊಂಡೊಯ್ಯುವ ಹರಿಗೋಲು ನಾವು ನೀವೂ ಎಲ್ಲರೂ ಈ ಮಾರ್ಗದಲ್ಲಿ ಸಾಗೋಣ ಒಂದಾಗಿ ಬಾಳೋಣ, ಸಬಲನಾಡನ್ನು ಕಟ್ಟೋಣ ಶಾಂತಿಮಂತ್ರವ ಜಪಿಸೋಣ ಸ್ವಾಸ್ಥ ಸದೃಢ ಮನಸ್ಕರಾಗೋಣ.

## ನಿಮಗೊಂದು ಪ್ರಶ್ನೆ

ರಚನೆ : ಎಂ. ಆರ್. ಪಾಟೀಲ್
ಎಲ್.ಟಿ. (ಸ್ಕೌಟ್)., ಡಿಟಿಸಿ.(ಸ್ಕೌಟ್)
ಕಬ್ಬೂರ
ತಾ॥ ಹಾವೇರಿ, ಜಿ॥ ಹಾವೇರಿ
ಮೊ : 9844585934

1. ನೀವೇಕೆ ಸ್ಕೌಟ್ ಗೈಡ್ ಸೇರಲೇ ಬೇಕು ?
ನಾವೇಕೆ ನಿಮ್ಮೆಲ್ಲರ ಜೊತೆಯಾಗಿರಬೇಕು ?
ನೀವೇಕೆ ನಮ್ಮಿಂದ ದೂರವಿರಬೇಕು ?
ವಿವೇಕವಂತರಾದರೆ ನೀವು ನಮ್ಮೊಡನಿರಬೇಕು.

2. ಹಲವಾರು ಹೊಸಬರ ಜೊತೆ ಸುತ್ತಾಡಬೇಕು.
ಹಲಬಗೆಯ ಆಟೋಟ ನೋಡಾಡಬೇಕು
ದಲ ದಲದಿ ಜೀವಿಸುವ ಕಲೆ ಕಲಿಯಬೇಕು
ಛಲ ಬಿಡದೇ ಗುರಿ ತಲುಪಲು ಸಿದ್ಧನಾಗಿರು ಸಾಕು.

3. ಹಗಲಿರುಳು ಬಗೆಬಗೆಯ ಹೊಸದನು ಕಾಣು
ನಗುಬೆರೆತ ಭಾವದಲಿ ಸ್ವರ್ಗಸುಖ ಕಾಣು
ಮಗುವಾಗಿ ಅನುಭವಿಸು ಚಟುವಟಿಕೆ ಮಾಣು
ಹೋಗು ನಡೆ ಭೇದದಲಿ ಚಿಣ್ಣರಂಗಣ ಕಾಣು.

4. ದೇವರಿಗೂ ದೇಶಕೂ ನಿನ್ನ ಸೇವೆಯ ಸೇನೆ
ದೇವರಂತಿರುವ ಬೇಡೆನ್ ಪಾವೆಲ್‌ಜೀಯ ನೆನೆ
ದೀವಿಗೆಯ ತೆರದಲಿ ಜ್ಞಾನವೀಯುವ ಮನೆ
ಕಾವುದೆಲ್ಲರ ಸೇವೆ ಮಾಡುವ ಮನಸ್ಫೂರ್ತಿಖಜಾನೆ.

5. ಶತಮಾನದಾಯಸ್ಸು ಈ ನಮ್ಮ ಚಳವಳಿಗೆ
ಶತಪ್ರಯತ್ನದವಕಾಶ ಬಾ ನಮ್ಮ ಬಳಿಗೆ
ಸೋತು ಶರಣಾಗದ ನಮ್ಮ ಮನದೊಳಗೆ
ಸೇತುವೇರ್ಪಡಲಿ ಸಹೋದರರ ಸಂಪರ್ಕಗಳಿಗೆ.

6. ವಿಶ್ವಾರ್ಹನಾಗು ನಡೆ ನಂಬಿಕೆಯ ಪಡೆ
ವಿಶ್ವದಲಿ ಸಹೋದರರ ಸ್ನೇಹ ಹಸ್ತದ ನಡೆ
ವಿಷವಿಲ್ಲದಾ ವಿನಯಿಗೆ ಪ್ರೀತಿಯಿದೆ ಪ್ರಾಣಿ ಪ್ರಕೃತಿಯೆಡೆಗೆ
ಶಿಸ್ತುಪಾಲಕನಿವನು ಹಾಕುವನು ಸಾರ್ವಜನಿಕಾಸ್ತಿ ಹಾನಿಗೆ
ತಡೆ

7. ಧೈರ್ಯ ಸಾಹಸ ಕ್ರೀಡೆ ನಿನಗೆಷ್ಟು ಬೇಕು?
ವ್ಯಯಿಸು ನೀನು ಹಿತಮಿತದಿ, ಕೈಲಾದಷ್ಟು ಮಾಡು ಸಾಕು
ಕಾಯ ವಾಚಾ ಮನಸಾ ಪರಿಶುದ್ಧವಗಿರಲುಬೇಕು.
ಜಯ ನಿನಗೆ ಲಭಿಸುವುದು ಅಲ್ಲವಿದು ಜೋಕು.

8. ಜಾಂಬೋರೇಟಿಗೆ ಬಂದ ನೀ ವಿಶ್ರಮಿಸಬೇಡ
ಜಾಂಬುವಂತನ ಬಲವ ನೀ ಮರೆಯಬೇಡ
ನಂಬು ನೀ ಚಳವಳಿಯ, ದಾರಿದ್ರ್ಯ ಬೇಡ
ನಂಬಿದರೆ ಭಯವಿಲ್ಲ ಧೈರ್ಯಗೆಡಬೇಡ.

# ಕರ್ನಾಟಕ ರಾಜ್ಯ ಜಾಂಬೋರೇಟ್‌ಗಳು

ಲೇಖನ :ರಾ.ಚಂದ್ರಶೇಖರನ್
ಮಾಜಿ ರಾಜ್ಯ ಸ್ಥಾನಿಕ ಆಯುಕ್ತರು (ಪ್ರಕಟಣೆಗಳು)

**1) ಜಾಂಬೋರಿ – ಜಾಂಬೋರೇಟ್ ಪದಗಳ ಶಬ್ದಾರ್ಥ:**
**ಜಾಂಬೋರಿ ಎಂದರೇನು ?**

ಸ್ಕೌಟ್ ಸಂಸ್ಥೆಯ ಸಂಸ್ಥಾಪಕ ಬಿ.ಪಿ.ರವರು ಕಾರಣರಾಗಿ, ಶಬ್ದಾರ್ಥ ಕೋಶಕ್ಕೆ ಸೇರಿದ ಹಲವಾರು ಪದಗಳಲ್ಲಿ, ಪ್ರಸ್ತುತ ಅರ್ಥದಲ್ಲಿನ ಜಾಂಬೋರಿ ಪದವೂ ಒಂದು 1872ರಷ್ಟು ಹಿಂದೆಯೇ ಈ ಶಬ್ದವು ಶಬ್ದಕೋಶದಲ್ಲಿ ಕಂಡು ಬರುವುದಾದರೂ, ಅದು "ಸದ್ದುಗದ್ದಲದಿಂದ ಕೂಡಿದ ಲೋಲುಪ್ತಿಯ ಬೃಹತ್ ಕೂಟ" ಎಂಬ ಅರ್ಥಕ್ಕೆ ಸೀಮಿತವಾಗಿದ್ದಿತು. 1920 ರಿಂದ ಈಚೆಗೆ ಆ ಪದಕ್ಕೆ ಸ್ಕೌಟ್ ಮತ್ತು ಗೈಡ್ ಬೃಹತ್ ಸಮಾವೇಶ ಎಂಬ ಅರ್ಥವು ಸೇರಿಕೊಂಡಿತು. ಬಿ.ಪಿ.ಅವರ ಆಫ್ರಿಕಾದ ಸೈನ್ಯ ಜೀವನದ ಅವಧಿಯಲ್ಲಿ ಅವರ ಅನುಭವಗಳ ಆಧಾರ, ಹಲವಾರು ಹೊಸ ಪದಗಳು ಶಬ್ದಕೋಶಕ್ಕೆ ಸೇರಿದವು. ಚಾಲ್ತಿಯಲ್ಲಿದ್ದ ಹಲವಾರು ಶಬ್ದಗಳಿಗೆ ಸೀಮಿತ ಅರ್ಥವು ಬದಲಾಯಿತು. ಹಾಗೆ ಬದಲಾದ ಅರ್ಥದಿಂದ ಮೆರೆಯುತ್ತಿರುವ ಜಾಂಬೋರಿ ಪದಕ್ಕೆ ಬಿ.ಪಿ. ಕಾರಣರಾದರು.

1920ರ "ಒಲಂಪಿಯು" ಅಂತಾರಾಷ್ಟ್ರೀಯ ಸಮಾವೇಶದ ವೇಳೆ ಸ್ಕೌಟುಗಳ (ಮುಂದಿನಗಳಲ್ಲಿ ಗೈಡುಗಳೂ ಸೇರಿದಂತೆ) ಬೃಹತ್ ಸಮಾವೇಶ ಎಂಬರ್ಥದಲ್ಲಿ ಜಾಂಬೋರಿ ಪದ ವಿಜೃಂಭಿಸಿತು, ಮುಂದುವರೆಯಿತು, ರೂಢಿಗೆ ಬಂದಿತು. ಹಾಗೆ ಪ್ರಾರಂಭವಾದ ದಿನಗಳಲ್ಲಿ ಸ್ಕೌಟಿಂಗ್ ಹಿತಾಸಕ್ತರೊಬ್ಬರು, ಜಾಂಬೋರಿ ಪದವನ್ನು ಹೇಗೆ ವಿವರಿಸುತ್ತೀರಿ? ಎಂದು ಕೇಳಲಾಗಿ, "ಕ್ರಿಯಾಶೀಲವಾಗಿ ಅಡಚಣೆ ಇಲ್ಲದೆ ಕೆಲಸ ಮಾಡಲು ಅನುಕೂಲವಾಗುವ ಮೊಣಕೈವರೆಗೆ ತೋಳಿರುವ ಷರ್ಟು, ಮೊಣಕಾಲವರೆಗಿನ ಷಾರ್ಟ್ಸ್, ಕೊರಳಿಗೆ ಕಂಠವಸ್ತ್ರ ಧರಿಸಿ, ಕೈಯಲ್ಲಿ ದಂಡ ಹಿಡಿದು, ಮುಖದಲ್ಲಿ ಕಿವಿಯಿಂದ ಕಿವಿಯವರೆಗಿನ ನಗುವನ್ನು ಮೈಗೂಡಿಸಿಕೊಂಡು ತಲೆಯ ಮೇಲೆ ಅಗಲದಂಚಿನ ಹ್ಯಾಟ್‌ನ್ನು ಅಲಂಕರಿಸಿಕೊಂಡು ಉಲ್ಲಾಸ ಭರಿತರಾಗಿ ನಲಿಯುವ ಬಾಲಕರ ಸಮಾವೇಶವೇ ಜಾಂಬೋರಿ" ಎಂದು ಬಿ.ಪಿ. ಉತ್ತರಿಸಿದರು.

1920ರ ಈ ವಿವರಣೆ, ಕಾಲಕಳೆದಂತೆ ವಿಶಾಲಗೊಳ್ಳುತ್ತಾ ಹೋಗಿ, ಇಂದು ಜಾಂಬೋರಿ ಎಂದಕೂಡಲೇ ಸಾವಿರಾರು ಸ್ಕೌಟ್ ಗೈಡ್‌ಗಳು ಒಂದೆಡೆ ಸೇರಿರುವ ಬೃಹತ್ ಚಿತ್ರಣವು ಕಣ್ಮುಂದೆ ಹಾಯುತ್ತದೆ. ಕನ್ನಡದಲ್ಲಿ ಸಹ ಹಲವು ಪದಗಳ ಅರ್ಥ ಸಮನ್ವಯದಲ್ಲಿ ಈ ಪದವನ್ನು ಕಾಣುತ್ತೇವೆ. ಉದಾ:– ಜಂಬೂ ಸವಾರಿ ಪದದ ಜಂಬೂರಿ,

ಜಂಬ = ಆಡಂಬರ, ವೈಭವೋಪೇತ

ಭೂರಿ = ಅಮಿತವಾದ, ಸ್ವರ್ಣಸದೃಶವಾದ

ಅರ್ಥಗಳನ್ನು ಕೂಡಿಸಿದರೆ ಜಂಬ + ಭೂರಿ = ಜಂಭೂರಿ ಆಯಿತು.

ಸ್ವರ್ಣಸದೃಶ, ವೈಭವದಿಂದ ಕೂಡಿದ ಸ್ಕೌಟ್ ಗೈಡ್‌ಗಳ ಬೃಹತ್ ರೀತಿಯ ಸಮಾವೇಶ / ಉತ್ಸವ ಎಂದು ಅರ್ಥೈಸಬಹುದಲ್ಲವೇ ? ಹಾಗಾಗಿ ಕಾಲಕ್ರಮದಲ್ಲಿ "ಜಂಬೂರಿ" ಮತ್ತು "ಜಂಭೂರಿ" ಪದಗಳು "ಜಾಂಬೋರಿ" ಎಂದಾಯಿತು ಎನ್ನಲು ಬರುತ್ತದೆ. ಅಲ್ಲವೆ. ಇತ್ತೀಚಿನ ದಿನಗಳಲ್ಲಿ ಅಂತಾರಾಷ್ಟ್ರೀಯ, ರಾಷ್ಟ್ರೀಯ ಸ್ತರಗಳಲ್ಲಿ "ಜಾಂಬೋರಿ" ಎಂದೂ, ರಾಜ್ಯ ಮಟ್ಟದಲ್ಲಿ "ಜಾಂಬೋರೇಟ್" ಎಂದೂ ರೂಢಿಗೆ ಬಂದಿದೆ.

**ಕರ್ನಾಟಕದಲ್ಲಿ ಜಾಂಬೋರಿ, ಜಾಂಬೋರೇಟ್‌ಗಳು**

1) **ಪ್ರಸ್ತಾವನೆ** : ಕರ್ನಾಟಕದ ದಕ್ಷಿಣ ಭಾಗ – ಮೈಸೂರು ಸಂಸ್ಥಾನಕ್ಕೆ ಸೀಮಿತವಾಗಿದ್ದ ರಾಜ್ಯದ 2 ಸಮಾವೇಶಗಳನ್ನು "ಮೈಸೂರು ರಾಜ್ಯ ರ‍್ಯಾಲಿ ಎಂದು ಕರೆಯುತ್ತಿದ್ದರು.
2) 1956ರಲ್ಲಿ "ವಿಶಾಲ ಮೈಸೂರು ರಾಜ್ಯ" ಅಸ್ತಿತ್ವಕ್ಕೆ ಬರುವುದರಲ್ಲಿತ್ತು. ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್, ಕರ್ನಾಟಕ (ಆಗ ಮೈಸೂರು) ಅಸ್ತಿತ್ವಕ್ಕೆ ಬಂದಾಗಿತ್ತು. ಹಾಗಾಗಿ ಅದನ್ನು "10ನೆಯ ಮೈಸೂರು ಸ್ಟೇಟ್ ಜಾಂಬೋರಿ" ಎಂದು ಕರೆಯಲಾಗಿತ್ತು.
3) ಅಲ್ಲಿಂದೀಚೆಗೆ "ಕರ್ನಾಟಕ" ಎಂಬ ಹೆಸರು ರೂಢಿಗೆ ಬಂದ ಮೇಲೆ ನಡೆದ ಸಮಾವೇಶಗಳು ರಾಜ್ಯ ಜಾಂಬೋರೇಟ್ ಎಂದು ಕರೆಯಲ್ಪಟ್ಟಿವೆ. ಆ ವೇಳೆಗೆ ರಾಷ್ಟ್ರ ಮತ್ತು ಅಂತಾರಾಷ್ಟ್ರೀಯ ಸಮಾವೇಶಗಳು ಬೃಹದ್ಗಾತ್ರದ–ವುಗಳಾಗಿದ್ದು, "ಜಾಂಬೋರಿ"ಗಳೆಂದೂ, ರಾಜ್ಯ ಮಟ್ಟದ ಸಮಾವೇಶಗಳು ಸಂಖ್ಯಾರೀತಿಯಲ್ಲಿ, ಅಷ್ಟು ಬೃಹತ್ ಅಲ್ಲದ ಕಾರಣ "ಜಾಂಬೋರೇಟ್" ಗಳಾಗಿ, ಒಂದು ರೀತಿಯ ಅಲಿಖಿತ ಒಡಂಬಡಿಕೆಯೋ ಎಂಬಂತೆ ರೂಢಿಗೆ ಬಂದಿದೆ.
4) ಸ್ಮರಣೆ : ಈ ಲೇಖನವನ್ನು ಬರೆಯುವ ಜವಾಬ್ದಾರಿ, ಒಂದು ರೀತಿಯ ಅಂಧಮಯ ಸನ್ನಿವೇಶದ ತಿಳುವಳಿಕೆ ಆಗಿತ್ತು. ಮಾಹಿತಿಗಾಗಿ ವಾರ್ಷಿಕ ವರದಿಗಳು, ಸ್ಮರಣ ಸಂಚಿಕೆಗಳನ್ನು ಪರಾಮರ್ಶಿಸಲಾಗುತ್ತಿದ್ದಾಗ ಹುಡುಕಾಟ, ಸಂಗ್ರಹ ಕಾರ್ಯವು ಮುಂದುವರೆದಂತೆ, ವಿಷಯದ ಬಗ್ಗೆ ಬೆಳಕು ಮೂಡಿತು. ಬಹಳ ವರ್ಷಗಳು ರಾಜ್ಯದ ತರಬೇತಿ ವಿಭಾಗದ ಆಯುಕ್ತರೂ, ತರಬೇತಿ ತಂಡದ ಮುಖ್ಯರೂ ಆಗಿದ್ದ ಡಾ॥ ಎಸ್.ಬಿ.ಕೌಶಿಕ್, ಅವರು 1985ರ ಜಾಂಬೋರಿ ಸ್ಮರಣ ಸಂಚಿಕೆಗಾಗಿ ಬರೆದ ಲೇಖನವು ದೊರಕಿ, ನನ್ನ ಲೇಖನಕ್ಕೆ ಹೊಂಬೆಳಕು ಚೆಲ್ಲಿ, ಮಾಹಿತಿಯ ನೆಲೆಗಟ್ಟು ನೀಡಿ, ಬರವಣಿಗೆಗೆ ಸ್ಫೂರ್ತಿಯಿತ್ತು ಮೆರಗು ನೀಡಿತು. ನನ್ನ ಮೂರೂ ವುಡ್‌ಬ್ಯಾಡ್ಜ್ ಶಿಬಿರಗಳ (ಕಬ್/ಸ್ಕೌಟ್/ರೋವರ್) "ಶಿಬಿರ ನಾಯಕ"ರಾಗಿ, ನನ್ನ

ಹಿತಾಸಕ್ತರಲ್ಲೊಬ್ಬರಾಗಿದ್ದ ಡಾ॥ ಕೌಶಿಕ್ ಅವರನ್ನು ಶ್ರದ್ಧೆ ಮತ್ತು ಕೃತಜ್ಞತೆಗಳಿಂದ ಸ್ಮರಿಸುತ್ತೇನೆ.

5) ಕರ್ನಾಟಕದಲ್ಲಿ ಈವರೆಗೆ 26 ಜಾಂಬೋರೇಟ್‌ಗಳು ನಡೆದಿವೆ. ಇದೀಗ 27ನೇ ರಾಜ್ಯ ಜಾಂಬೋರೇಟ್‌ಗೆ ಸಿದ್ಧತೆ ಭರದಿಂದ ಸಾಗಿದೆ. ಆ ಜಾಂಬೋರೇಟ್‌ನ ಸ್ಮರಣ ಸಂಚಿಕೆಗಾಗಿ ಈ ಲೇಖನ ಮೂಡಿಬಂದಿದೆ.

6) ಕಳೆದ ಶತಮಾನ ಮೊದಲ ದಶಕದ ಉತ್ತರಾರ್ಧದಲ್ಲಿ ಕನ್ನಡ ನೆಲದಲ್ಲಿ 1909ರಲ್ಲಿ ಸ್ಕೌಟಿಂಗ್ ಪ್ರಾರಂಭವಾದದ್ದು ಚಾರಿತ್ರಿಕ ದೃಷ್ಟಿ. ಅದೇ ಶತಮಾನದ ಎರಡನೆಯ ದಶಕದ ಉತ್ತರಾರ್ಧದಲ್ಲಿ, ಸರ್ವರಿಗೂ ಮುಕ್ತವಾಗಿ, 1917–18ರಲ್ಲಿ ಸ್ಕೌಟಿಂಗ್ ಪ್ರಾರಂಭವಾದದ್ದು ವ್ಯಾವಹಾರಿಕ ಹಾಗೂ ವಾಸ್ತವಿಕ ದೃಷ್ಟಿ.

7) ಹಾಗೆ ಪ್ರಾರಂಭವಾದ ಎರಡನೆಯ ವರ್ಷ 1920ರಲ್ಲಿ ಏಳು ತಿಂಗಳ ಅಂತರದಲ್ಲಿ ಎರಡು ಸ್ಟೇಟ್ ರ್‍ಯಾಲಿಗಳು ನಡೆದದ್ದು ವಿಶೇಷವಾದದ್ದುಷ್ಟಿ ಎನ್ನಲೆ ?

1ನೆಯ ಸ್ಟೇಟ್ ರ್‍ಯಾಲಿ ಆಗತಾನೇ ಅಸ್ತಿತ್ವಕ್ಕೆ ಬರಲಿದ್ದ "ಕಾಫಿ"ನಾಡು ಚಿಕ್ಕಮಗಳೂರಿನಲ್ಲಿ ನಡೆಯಿತು. "ಕಾಫಿ" ಬೆಳೆ ಪ್ರಾರಂಭವಾದದ್ದು ಚಿಕ್ಕಮಗಳೂರು ಬಳಿಯ "ಬಾಬಾಬುಡನ್‌ಗಿರಿ" ಪರ್ವತ ಪ್ರಾಂತ್ಯದಲ್ಲಿ, ಕಾಫಿ ಪೇಯವು ಸರ್ವಮಾನ್ಯವಾದದ್ದೂ, ದಿನ ನಿತ್ಯ ಬಳಕೆಯಲ್ಲಿ ಅತ್ಯವಶ್ಯಕವೂ ಅದ ಪೇಯ. ಲವಲವಿಕೆಯಿಂದ ಕೆಲಸ ಮಾಡಲು "ಪ್ರಚೋದಕ". ಹಾಗಾಗಿ ಚಿಕ್ಕಮಗಳೂರಿನ ರಾಜ್ಯದ ಮೊದಲನೆಯ ಜಾಂಬೋರೇಟ್ (ಆಗಿನ ಸ್ಟೇಟ್ ರ್‍ಯಾಲಿ) ಸ್ಕೌಟಿಂಗ್‌ನ ಬೆಳವಣಿಗೆಗೆ ಕಾಫಿ ಪೇಯದಂತೆ ಪ್ರಚೋದಕವಾಯಿತೆನ್ನಬೇಕು.

8) ಅದೇ ವರ್ಷದ ಕೊನೆ, ಡಿಸೆಂಬರ್‌ನಲ್ಲಿ ರಾಜ್ಯದ 2ನೆಯ ಸ್ಟೇಟ್ ರ್‍ಯಾಲಿ ನಡೆದದ್ದು, ಕೋಲಾರ ಚಿನ್ನದ ಗಣಿ ಪ್ರದೇಶದ ಬಳಿಯ ಬೌರಿಂಗ್ ಪೇಟೆ (ಇಂದಿನ ಬಂಗಾರು ಪೇಟೆ)ಯಲ್ಲಿ. ಈ ರಾಜ್ಯ ರ್‍ಯಾಲಿಯ ಪ್ರಭಾವವೇ ಇರಬೇಕು, ರಾಜ್ಯದಲ್ಲಿ ಉತ್ತಮ ಗುಣಮಟ್ಟ ಹೊಂದಿ, ಮುಂದಿನ ದಿನಗಳಲ್ಲಿ ಸ್ವರ್ಣಸದೃಶವಾಗಿ ಸಂಸ್ಥೆಯು ಬೆಳೆಯುತ್ತಿದೆ.

9) "ಬಾಯ್ ಸ್ಕೌಟ್ಸ್ ಆಫ್ ಮೈಸೂರು" ಸಂಸ್ಥೆಯ ವತಿಯಿಂದ 9 ಸ್ಟೇಟ್ ರ್‍ಯಾಲಿಗಳು ನಡೆದವು. ಪ್ರಾರಂಭದ ಬಹಳಷ್ಟು ರಾಜ್ಯ ಸ್ಕೌಟ್ ರ್‍ಯಾಲಿಗಳಲ್ಲಿ ಶ್ರೀಮದ್ಯುವ ರಾಜರೂ, "ಚೀಫ್ ಸ್ಕೌಟ್"ರೂ ಆಗಿದ್ದ ಶ್ರೀ ಕಂಠೀರವ ನರಸಿಂಹರಾಜ ಒಡೆಯರ್ ಅವರು ಭಾಗವಹಿಸಿದ್ದರು.

10) ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್, ಮೈಸೂರು ಸ್ಟೇಟ್ (ಮುಂದೆ ಕರ್ನಾಟಕ) ಅಸ್ತಿತ್ವಕ್ಕೆ ಬಂದ ಮೇಲೆ ಪ್ರಪ್ರಥಮ, 10ನೇ ರಾಜ್ಯ ಜಾಂಬೋರೀ 1956 ಮೇ ನಲ್ಲಿ ತುಮಕೂರಿನಲ್ಲಿ ನಡೆಯಿತು.

**ಜಾಂಬೋರಿ / ಜಾಂಬೋರೇಟ್‌ಗಳಲ್ಲಿ ಏನನ್ನು ಕಾಣುತ್ತೇವೆ ? ಏನು ನಡೆಯುತ್ತದೆ ?**

ಅ) **ಪ್ರಾರಂಭದ ದಿನಗಳಲ್ಲಿ** : (1) ಸೈನ್ಯ ಮಾದರಿಯ ಧ್ವಜ ಸಮಾರಂಭಗಳು, ಗೌರವರಕ್ಷೆ, ಪಥಚಲನೆ ಮತ್ತು ಕವಾಯತು (2) ವಿವಿಧ ಸ್ಕೌಟ್ ಕೌಶಲಗಳ ಪ್ರದರ್ಶನ / ಸ್ಪರ್ಧೆಗಳು (3) ಅಗ್ರಗಾಮಿ ಯೋಜನೆಗಳು (4) ಶಿಬಿರಾಗ್ನಿ (5) ಚಾರಣಗಳು, ಕಗ್ಗಾಡು ಜೀವನದ ದರ್ಶನ ಮತ್ತು ಕಷ್ಟ ಸಹಿಷ್ಣುತೆ (6) ಪರಸ್ಪರ ಮೈತ್ರಿ, ಕಲಿಕೆ, ಶಿಸ್ತು ಮತ್ತು ಸಂಯಮ.

ಆ) **ಇಂದಿನ ದಿನಗಳಲ್ಲಿ ಮಕ್ಕಳ ದೃಷ್ಟಿ** :– ಸ್ಪರ್ಧೆಗಳು, ಕೌಶಲ ಪ್ರದರ್ಶನ, ಚಾರಣ, ಸಾಹಸಿಕ ಚಟುವಟಿಕೆಗಳು, ಚಿತ್ರಗಳು, ನಾಣ್ಯಗಳು ಮೊದಲಾದವುಗಳ ಸಂಗ್ರಹ ಹಾಗೂ ಇತರ ಸೃಜನ ಶೀಲ ವಸ್ತುಗಳ ಪ್ರದರ್ಶನ, ತಿನಿಸುಗಳ ಅಂಕಣ, ಶಿಬಿರಾಗ್ನಿ, ಸ್ಥಳೀಯ ಚಾರಿತ್ರಿಕ, ಪ್ರೇಕ್ಷಣೀಯ ಸ್ಥಳಗಳ ಭೇಟಿ, ರಾಷ್ಟ್ರೀಯ, ಅಂತಾರಾಷ್ಟ್ರೀಯ ದಿನಾಚರಣೆಗಳು ಮತ್ತು ಅಂತರ ಜಿಲ್ಲಾ ಭೇಟಿಗಳು. **ವಯಸ್ಕ ನಾಯಕರ ದೃಷ್ಟಿಯಲ್ಲಿ** :– ಸ್ಕೌಟರ್ / ಗೈಡರ್‌ಗಳ ಸಮಾವೇಶ ವೃಕ್ಷಮಣಿಧಾರಕರ ಸಮಾವೇಶ, ಮುಕ್ತದಳಗಳ ನಾಯಕರುಗಳ ಸಮಾವೇಶ, ಕಾರ್ಯದರ್ಶಿಗಳು ಮತ್ತು ಆಯುಕ್ತರುಗಳ ಸಮಾವೇಶ, ತರಬೇತುದಾರರ ಸಮಾವೇಶ, **ಸಾಮಾಜಿಕ ದೃಷ್ಟಿಯಿಂದ** :– ದಿನದುಪಕಾರ (ಸಮಾಜಸೇವೆ), ಪರಿಸರ ಸಂರಕ್ಷಣೆ ಕಾರ್ಯಕ್ರಮಗಳು, ಸಾಂಸ್ಕೃತಿಕ ಪ್ರದರ್ಶನಗಳು, ಭವ್ಯ ಶಿಬಿರಾಗ್ನಿ, ಉದ್ಘಾಟನೆ ಮತ್ತು ಸಮಾರೋಪ ಸಮಾರಂಭಗಳು, ಸರ್ವಧರ್ಮ ಪ್ರಾರ್ಥನೆ ಹೀಗೆ ಎಡೆತಡೆಯಿಲ್ಲದ ಕಾರ್ಯಕ್ರಮಗಳು.

ಇ) **ಪಕ್ಷಿ ನೋಟ** : ಕಣ್ಣು ಹಾಯುವಷ್ಟು ದೂರ ತಂಬುಗಳೋ ಎಲ್ಲೆಲ್ಲಿ ನೋಡಿದರೂ ಲಗುಬಗೆಯಿಂದ, ನಗುನಗುತ್ತಾ, ಓಡಾಡುವ ಸಮವಸ್ತ್ರಧಾರೀ ಮಕ್ಕಳು, ಬೃಹದಾಕಾರದ ಎಡೆಬಿಡದ ಕಾರ್ಯಕ್ರಮಗಳ ಮಹಾಪೂರ. ಇವುಗಳು ಕಣ್ಮನಗಳಿಗೆ ತಂಪುನೀಡಿ ಮುದನೀಡುತ್ತವೆ. ಸಮಾಜಹಿತ ಕಾಪಾಡುತ್ತವೆ.

ಈ) **ಮೈತ್ರಿ, ಸಹಬಾಳ್ವೆ, ಸಮಾಭಾವ, ದೇಶಪ್ರೇಮ** ಇವು ಉಕ್ಕಿಹರಿಯುತ್ತವೆ. ಈ ಅಂಶಗಳೇ ಜಾಂಬೋರೇಟ್‌ಗಳ ಪ್ರಮುಖ ಹಾಗೂ ಮೂಲ ಉದ್ದೇಶ.

**9) ಕರ್ನಾಟಕ ರಾಜ್ಯ ಜಾಂಬೋರೇಟ್‌ಗಳ ಪಕ್ಷಿನೋಟ**

ಅ) ಮೊದಲ ಒಂಭತ್ತು ಸ್ಟೇಟ್ ರ್‍ಯಾಲಿಗಳು :–

**1ನೇ ಸ್ಟೇಟ್ ರ್‍ಯಾಲಿ** : 1920

ಸ್ಥಳ : ಚಿಕ್ಕಮಗಳೂರು, ಕಡೂರು ಜಿಲ್ಲೆ
ಕಾಲಾವಧಿ : ಏಪ್ರಿಲ್–ಮೇ, 1920, 9 ದಿನಗಳು
ಹಾಜರಿ : 350 ಸ್ಕೌಟುಗಳು ಭಾಗವಹಿಸಿದ್ದರು

**2ನೇ ಸ್ಟೇಟ್ ರ್‍ಯಾಲಿ** : 1920

ಸ್ಥಳ : ಬೌರಿಂಗ್ ಪೇಟೆ (ಈಗ ಬಂಗಾರು ಪೇಟೆ) ಕೋಲಾರ ಜಿಲ್ಲೆ
ಕಾಲಾವಧಿ : ಡಿಸೆಂಬರ್ 1920, 5 ದಿನಗಳು
ಹಾಜರಿ : 500 ಸ್ಕೌಟುಗಳು ಭಾಗವಹಿಸಿದ್ದರು

**3ನೇಸ್ಟೇಟ್ ರ್‍ಯಾಲಿ** : 1922–23

ಸ್ಥಳ : ನಂದಿ (ಕೋಲಾರಜಿಲ್ಲೆ) ಈಗ ಚಿಕ್ಕಬಳ್ಳಾಪುರ ಜಿಲ್ಲೆ
ಕಾಲಾವಧಿ : ಡಿಸೆಂಬರ್–ಜನವರಿ, 1922–23, 4 ದಿನಗಳು
ಹಾಜರಿ : 700 ಸ್ಕೌಟುಗಳು ಭಾಗವಹಿಸಿದ್ದರು
ವಿಶೇಷ : ಮದ್ರಾಸು (ಚೆನ್ನೈ) ಬಾಂಬೆ (ಮುಂಬೈ)

ಎಮ್.ಪಿ. (ಮಧ್ಯಪ್ರದೇಶ) ಗಳಿಂದ ಸಹ ಸ್ಕೌಟುಗಳು ಬಂದಿದ್ದರು.

**4ನೇ ಸ್ಟೇಟ್ ರ್‍ಯಾಲಿ 1926** :–

ಸ್ಥಳ : ಶಿವಮೊಗ್ಗ
ಕಾಲಾವಧಿ : ಏಪ್ರಿಲ್ 1926 – 4 ದಿನಗಳು
ಹಾಜರಿ : 450 ಸ್ಕೌಟುಗಳು ಭಾಗವಹಿಸಿದ್ದರು

**5ನೇ ಸ್ಟೇಟ್ ರ್‍ಯಾಲಿ 1929** :–

ಸ್ಥಳ : ತುಮಕೂರು
ಕಾಲಾವಧಿ : ಏಪ್ರಿಲ್ 1926 – 6 ದಿನಗಳು
ಹಾಜರಿ : 750 ಸ್ಕೌಟುಗಳು ಭಾಗವಹಿಸಿದ್ದರು
ವಿಶೇಷ : ಚೀಫ್ ಸ್ಕೌಟ್‌ರವರಿಂದ ಸೂಚನೆ ಬಂದ ಒಂದು ವಾರದೊಳಗೆ ಸಂಘಟಿಸಲಾಗಿತ್ತು. ಸ್ಥಳೀಯ ಜಿಲ್ಲಾ ಆಯುಕ್ತ ಹಾಗೂ ಕಾರ್ಯದರ್ಶಿ ಶ್ರೀ ಸಿ.ಕೃಷ್ಣರಾವ್ ಅವರ ಅವಿಶ್ರಾಂತ ಸೇವೆಯು ಕಾರಣವಾಗಿದ್ದಿತು. (ದವಸ, ಧಾನ್ಯ ಇತ್ಯಾದಿ ದಾನ ರೂಪದಲ್ಲಿ ಬಂದು ಇಡೀ ಸಂಘಟನೆಯ ಖರ್ಚು ವೆಚ್ಚ ರೂ.1000ಕ್ಕೆ ಸೀಮಿತವಾಗಿದ್ದಿತು).

**6ನೇ ಸ್ಟೇಟ್ ರ್‍ಯಾಲಿ 1931** :–

ಸ್ಥಳ : ಮೈಸೂರು
ಕಾಲಾವಧಿ : ಮೇ 1931 4– ದಿನಗಳು
ಹಾಜರಿ : 900 ಸ್ಕೌಟುಗಳು ಭಾಗವಹಿಸಿದ್ದರು

**7ನೇ ಸ್ಟೇಟ್ ರ್‍ಯಾಲಿ 1933** :–

ಸ್ಥಳ : ಹಾಸನ
ಕಾಲಾವಧಿ : ಮೇ 1933 – 6 ದಿನಗಳು
ಹಾಜರಿ : 700 ಸ್ಕೌಟುಗಳು ಭಾಗವಹಿಸಿದ್ದರು

**8ನೇ ಸ್ಟೇಟ್ ರ್‍ಯಾಲಿ 1938** :–

ಸ್ಥಳ : ಚಿತ್ರದುರ್ಗ
ಕಾಲಾವಧಿ : ಆಗಸ್ಟ್ 938, 4 ದಿನಗಳು
ಹಾಜರಿ : 1500 ಸ್ಕೌಟುಗಳು ಭಾಗವಹಿಸಿದ್ದರು
ವಿಶೇಷ : ರ್‍ಯಾಲಿಯಲ್ಲಿ ಭಾಗವಹಿಸಿದ್ದ ಚೀಫ್ ಸ್ಕೌಟ್ ಅವರ ಆಶಯದ ಮೇರೆಗೆ ಸಂಸ್ಥೆಗೊಂದು ಕೇಂದ್ರ ಶಿಬಿರ ನೆಲೆಗಾಗಿ ಶೋಧನೆ ಪ್ರಾರಂಭವಾಯಿತು.

ಬೆಂಗಳೂರು ಹೆಬ್ಬಾಳ ಬಳಿಯ ಕೊಡಿಗೇಹಳ್ಳಿ ಗುಟ್ಟೆ ಆಂಜನೇಯ, ಬೆಂಗಳೂರು ದಕ್ಷಿಣ ಬನಶಂಕರಿ ಬಳಿಯ ಸಾರಕ್ಕಿ ಬಂಡೆ, ಮೈಸೂರು ರಸ್ತೆ, ಕೆಂಗಲ್ ಆಂಜನೇಯ, ನೆಲಮಂಗಲ ತಾ॥ ನಿಜಗಲ್ ಬೆಟ್ಟ, ತುಮಕೂರು ಬಳಿ ನಾಮದ ಚೆಲುಮೆ ಹೀಗೆ ಹತ್ತು ಹಲವಾರು ಸ್ಥಳಗಳ ಪರಿಶೀಲನೆಯ ಬಳಿಕ ದೊಡ್ಡಬಳ್ಳಾಪುರದ ಅಸಿಸ್ಟೆಂಟ್ ಕಮಿಷನರ್ ಶ್ರೀ ಜೆ.ಬಿ.ಮಲ್ಲಾರಾಧ್ಯರ ಪ್ರಸ್ತಾವನೆಯು ರೆವಿನ್ಯೂ ಕಮಿಷನರ್ ಶ್ರೀ ಕೆ.ಅನಂತರಾಮನ್ ಅವರಿಂದ ಅನುಮೋದನೆ ಪಡೆದು 1939ರಲ್ಲಿ "ಕೇಂದ್ರ ತರಬೇತಿ ಶಿಬಿರ" (ಸಿ.ಟಿ.ಸಿ)ಆಗಿ ಅಸ್ತಿತ್ವಕ್ಕೆ ಬಂದಿತು. ಅದೇ ಈಗಿನ ಡಾ॥ ಅನಿಬೆಸೆಂಟ್ ಪಾರ್ಕ್, ದೊಡ್ಡಬಳ್ಳಾಪುರ.

**9ನೆಯ ಸ್ಟೇಟ್ ರ್‍ಯಾಲಿ** : 1940

ಸ್ಥಳ : ಕಬ್ಬನ್ ಪಾರ್ಕ್, ಬೆಂಗಳೂರು
ಕಾಲಾವಧಿ : ಡಿಸೆಂಬರ್ 1940 – 5 ದಿನಗಳ
ಹಾಜರಿ : 3712 ಸ್ಕೌಟುಗಳು ಭಾಗವಹಿಸಿದ್ದರು
ವಿಶೇಷ :

1) ಚೀಫ್ ಸ್ಕೌಟ್ ಮತ್ತು ಶ್ರೀಮನ್ಮಹಾರಾಜರಾಗಿದ್ದ ಶ್ರೀ ಜಯಚಾಮರಾಜ ಒಡೆಯರ್ ಅವರು ರ್‍ಯಾಲಿಯನ್ನು ಉದ್ಘಾಟಿಸಿದರು.
2) ನೆರೆರಾಜ್ಯಗಳಿಂದಲೂ, ಸಿಲೋನ್ (ಈಗಿನ ಶ್ರೀಲಂಕಾ) ಸ್ಕೌಟುಗಳು ಭಾಗವಹಿಸಿದ್ದರು.
3) ಇದೇ ಅವಧಿಯಲ್ಲಿ ಮೊದಲನೆಯ ರಾಜ್ಯ ರೋವರ್ ಮೂಟ್ ಸಹ ನಡೆಯಿತು.
4. ಇದೇ ಅವಧಿಯಲ್ಲಿ ಮೊದಲನೆಯ ರಾಜ್ಯ ಚೀಫ್ ಸ್ಕೌಟ್ ಶ್ರೀಕಂಠೀರವನರಸಿಂಹರಾಜ ಒಡೆಯರ್ ಅವರು ಸಮವಸ್ತ್ರಧಾರಿಗಳಾಗಿ ಬಂದಿದ್ದರು. ವಿವಿಧ ಕಾರ್ಯಕ್ರಮಗಳನ್ನು ವೀಕ್ಷಿಸಿ ಮೆಚ್ಚುಗೆ ನೀಡಿ ಸ್ಫೂರ್ತಿ ನೀಡಿದರು.

**10ನೆಯ ಮೈಸೂರು ಸ್ಟೇಟ್ ಜಾಂಬೋರಿ**

ಸ್ಥಳ : ತುಮಕೂರು
ಕಾಲಾವಧಿ : ಮೇ, 1956, 3 ದಿನಗಳು
ಹಾಜರಿ : 13,861 ಸ್ಕೌಟ್, ಗೈಡ್‌ಗಳು ಭಾಗವಹಿಸಿದ್ದರು.

ವಿಶೇಷ :– 16 ವರ್ಷಗಳ ಅಂತರದಲ್ಲಿ ನಡೆದ ರಾಜ್ಯ ಸಮಾವೇಶ. ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಅಸ್ತಿತ್ವಕ್ಕೆ ಬಂದ ನಂತರದಲ್ಲಿ ನಡೆದ ಮೊದಲ ಸಮಾವೇಶ. ಮೊದಲ ಬಾರಿಗೆ ವಿಶೇಷ ಸ್ಮರಣ ಸಂಚಿಕೆ ಹೊರತರಲಾಯಿತು. ಹೈದರಾಬಾದ್‌ನಿಂದ ಒಂದು ಪೆಟ್ರೋಲ್ ಸ್ಕೌಟ್‌ಗಳು ಸೈಕಲ್ ಜಾಥಾ ಬಂದು ಭಾಗವಹಿಸಿದ್ದರು. ಶ್ರೀ ಜೆ.ಬಿ.ಮಲ್ಲಾರಾಧ್ಯ, ಶಿಬಿರ ಮುಖ್ಯರಾಗಿದ್ದರು. ಡಾ॥ ಎಸ್.ಬಿ.ಕೌಶಿಕ್, ಜಾಂಬೋರಿ ನಿರ್ದೇಶಕರಾಗಿದ್ದರು ಇದು ತುಮಕೂರಿನಲ್ಲಿ ನಡೆದ ಎರಡನೆಯ ಜಾಂಬೋರೇಟ್ ಭುವನತ್ರಯ ರೆನಿಸಿದ ಶ್ರೀ ಬಿ.ಸಿ.ನಂಜುಂಡಯ್ಯ, ಶ್ರೀ ಕೆ.ಶ್ರೀಕಂಠಯ್ಯ ಮತ್ತು ಶ್ರೀ ಎಂ.ಹೆಚ್.ರಾಮಚಂದ್ರರಾವ್ ಇವರ ಅವಿಶ್ರಾಂತ ಸೇವೆ ಜಾಂಬೋರಿಯ ಯಶಸ್ಸಿಗೆ ಕಾರಣವಾಯಿತು.

**11ನೆಯ ರಾಜ್ಯ ಜಾಂಬೋರೇಟ್**

ಸ್ಥಳ : ಕೇಂದ್ರ ತರಬೇತಿ ಶಿಬಿರ,

ದೊಡ್ಡಬಳ್ಳಾಪುರ (ಸಿ.ಟಿ.ಸಿ. –ಈಗಿನ ಡಾ॥ ಆನಿಬೆಸೆಂಟ್ ಪಾರ್ಕ್)

ಕಾಲಾವಧಿ : ಮೇ, 1967, 5 ದಿನಗಳು

ಹಾಜರಿ : 2000 ಸ್ಕೌಟ್ ಗೈಡ್‌ಗಳು ಭಾಗವಹಿಸಿದ್ದರು.

ವಿಶೇಷ : 11.05.1967ರಂದು ಇದ್ದಕ್ಕಿದ್ದಂತೆ ಮುಗಿಬಿದ್ದ ಬಿರುಗಾಳಿ, ಮಳೆಗಳು ತಂಬುಗಳನ್ನು ಗಾಳಿಯಲ್ಲಿ ಮೇಲೆಗರಿಸಿ, ಇಡೀ ಪ್ರದೇಶವನ್ನು ಜಲಾವೃತಮಾಡಿ, ವಾತಾವರಣವನ್ನು ಅಸ್ತವ್ಯಸ್ತಗೊಳಿಸಿ, ಶಿಬಿರ ವಾಸಿಗಳನ್ನು ಕಂಗಾಲುಗೊಳಿಸಿದಾಗ, ಸ್ಕೌಟ್–ಗೈಡ್‌ಗಳು ತೋರಿದ ಸಮಯ ಸ್ಫೂರ್ತಿ, ಕಷ್ಟಸಹಿಷ್ಣುತೆ, ತಾಳ್ಮೆ ಮತ್ತು ಸ್ಥೈರ್ಯಗಳು ಶ್ಲಾಘನೀಯವಾದುವು.

**12ನೆಯ ರಾಜ್ಯ ಜಾಂಬೋರೇಟ್**

ಸ್ಥಳ : ಮಡಕೇರಿ, ಕೊಡಗು ಜಿಲ್ಲೆ

ಕಾಲಾವಧಿ : ಮೇ, 1970, 5 ದಿನಗಳು

ಹಾಜರಿ : 2000 ಸ್ಕೌಟ್ ಗೈಡ್‌ಗಳು ಭಾಗವಹಿಸಿದ್ದರು.

ವಿಶೇಷ : ಇದು ಕಾಫಿನಾಡಿನ 2ನೆಯ ರಾಜ್ಯ ಸಮಾವೇಶ.

**13ನೆಯ ರಾಜ್ಯ ಜಾಂಬೋರೇಟ್**

ಸ್ಥಳ : ಹುಬ್ಬಳ್ಳಿ – ಧಾರವಾಡ

ಕಾಲಾವಧಿ : ಡಿಸೆಂಬರ್, 1972 – 6 ದಿನಗಳು

ಹಾಜರಿ : ––––– ಸ್ಕೌಟ್ ಗೈಡ್‌ಗಳು ಭಾಗವಹಿಸಿದ್ದರು. ಈ ಜಾಂಬೋರೇಟ್ ಕರ್ನಾಟಕ ಉತ್ತರ ಭಾಗದಲ್ಲಿ (ತುಂಗಭದ್ರಾ ನದಿ ಉತ್ತರಕ್ಕೆ ) ನಡೆದ ಮೊದಲನೆಯ ಸಮಾವೇಶ.

1. ದಿನಾಂಕ : 1972 ರಲ್ಲಿ ಹುಬ್ಬಳ್ಳಿಇ ಧಾರವಾಡದಲ್ಲಿ, ನಡೆದ ಜಾಂಬಾರೇಟ್
2. ಮಾಜಿ ಉಪ ರಾಷ್ಟ್ರಪತಿಗಳು, ಅವಿಭಜಿತ ಬಾಂಬೆ ಪ್ರಾಂತ್ಯದ ಮುಖ್ಯ ಸ್ಕೌಟ್ ಕಮಿಷವಜತ ಆಗಿದ್ದ ಮಾನ್ಯ ಡಾ॥ ಬಿಡಿ ಜತ್ತಿಃ ಆದೀನ ಕರ್ನಾಟಕ ಮುಖ್ಯ ಮಂತ್ರಿಗಳು ಮುಂದೆ ರಾಷ್ಟ್ರದ ಪ್ರಧಾನ ಮಂತ್ರಿಗಳು ಆಗಿದ್ದ ಮಾವ್ಯ ಹೆಚ್.ಡಿ. ದೇವೇಗೌಡರು. ರಿಪಬ್ಲಿಕ್ ಡೇ ಪೆರೇಡ್ ಇನ್‌ಸ್ಪೆಕ್ಟರ್ ಬ್ರಿಗೇಡಿಯರ್ ಎ.ಎಸ್. ಆಯ್ಯರ್. WAGGGS ನ ಮಾಜಿ ಡೈರೆಕ್ಟರ್ ಹಾಗೂ ನಮ್ಮ ಪುಣೆಬಳಿಯ ಸಂಗಂನ ಕೋಶಾಧಿಕಾರಿ ಡಾ॥ ಪೆ , ಮಾಜಿ ರಾಷ್ಟ್ರ ಆಯಕ್ತರು ಹಾಗೂ ವಿಶ್ವಸಂಸ್ಥೆಂಬ ಶಂತಿ ದೂತ ಪ್ರಶಸ್ತಿ ಸರ್ದಾರ್ ಲಕ್ಷ್ಮಣ್‌ಸಿಂಗ್, ಕರ್ನಾಟಕ ವಿವಿ ಮಾಜಿ ಉಪಕುಲಪತಿ ಡಾ॥ ಅಡಕಿ ಇವರುಗಳೇ ಮುಂತಾದ ಪ್ರತಿಭಾನ್ವಿತ ವ್ಯಕ್ತಿಗಳು ಜಾಂಬೋರೇಟ್‌ಗಳಿಗೆ ಎಗಮಿಸಿ ಜಾಂಬೋರೇಟ್‌ಗಳಿಗಿ ಶೋಭೆ ತಂದಿರುವುದೇ ಅಲ್ಲದೆಮ ಸ್ಕೌಟ್ಸ್ ಮತ್ತು ಗೈಡ್ಸ್‌ಗೆ ಆಶೀರ್ವಚನ ನೀಡಿರುತ್ತಾರೆ.

**14ನೆಯ ರಾಜ್ಯ ಜಾಂಬೋರೇಟ್**

ಸ್ಥಳ : ಸಂಡೂರು, ಬಳ್ಳಾರಿ ಜಿಲ್ಲೆ

ಕಾಲಾವಧಿ : ಅಕ್ಟೋಬರ್, 1975 – 6 ದಿನಗಳು

ಹಾಜರಿ : 3000 ಸ್ಕೌಟ್ ಗೈಡ್‌ಗಳು ಭಾಗವಹಿಸಿದ್ದರು.

ವಿಶೇಷ : ಅವಧಿಪೂರ್ಣ ಮಳೆ ಬರುತ್ತಿದ್ದು, ಸಂಡೂರು ರಾಜ ವಂಶದವರು ಮಕ್ಕಳಿಗೆ ಸೂಕ್ತ ವಸತಿ ಕಲ್ಪಿಸಿದ್ದರು.

**15ನೆಯ ರಾಜ್ಯ ಜಾಂಬೋರೇಟ್**

ಸ್ಥಳ : ಸಕಲೇಶಪುರ, ಹಾಸನ ಜಿಲ್ಲೆ

ಕಾಲಾವಧಿ : ಡಿಸೆಂಬರ್ 77– ಜನವರಿ 1978 – 7 ದಿನಗಳು

ಹಾಜರಿ : 3048 ಸ್ಕೌಟ್ ಗೈಡ್‌ಗಳು ಭಾಗವಹಿಸಿದ್ದರು.

ವಿಶೇಷ : ರಾಜ್ಯ ಸಂಸ್ಥೆಯ 60ನೆಯ ವರ್ಷ ಮತ್ತು ವಿಶ್ವ ಸ್ಕೌಟಿಂಗ್‌ನ 70ನೆಯ ವರ್ಷಗಳ ಆಚರಣೆಗಳು. ಸ್ಥಳೀಯ ಸೆಂಟ್ ಜೋಸೆಫ್ಸ್ ಕಾನ್ವೆಂಟ್‌ನ ಚಾಪಲ್‌ನಲ್ಲಿ ನಡೆದ ಮಿಡ್‌ನೈಟ್ ಮಾಸ್ "ಕಾಫಿ"ನಾಡಿನ ಮೂರನೆಯ ಹಾಗೂ ಜಿಲ್ಲೆಯ 2ನೆಯ ಸಮಾವೇಶ.

**16ನೆಯ ರಾಜ್ಯ ಜಾಂಬೋರೇಟ್**

ಸ್ಥಳ : ಕುಮಟಾ, ಉತ್ತರ ಕನ್ನಡ ಜಿಲ್ಲೆ

ಕಾಲಾವಧಿ : ಜನವರಿ 1980 – 7 ದಿನಗಳು

ಹಾಜರಿ : 3500 ಸ್ಕೌಟ್ ಗೈಡ್‌ಗಳು ಭಾಗವಹಿಸಿದ್ದರು.

ವಿಶೇಷ : ಕರಾವಳಿ ಪ್ರದೇಶದ ಮೊದಲ ಸಮಾವೇಶ ಸಮುದ್ರ ತೀರ, ಶರಾವತಿ ನದಿಯ ಹಿನ್ನೀರಿನಲ್ಲಿ ಮೋಟಾರ್ ಬೋಟ್ ಕ್ರುಯಿಸ್. ಕಬ್ಸ್– ಬುಲ್‌ಬುಲ್ಸ್ ಉತ್ಸವ ವಿಶ್ವ ಗೈಡಿಂಗ್‌ನ 70ನೆಯ ವರ್ಷ ಆಚರಣೆ

**17ನೆಯ ರಾಜ್ಯ ಜಾಂಬೋರೇಟ್**

ಸ್ಥಳ : ರಾಯಚೂರು

ಕಾಲಾವಧಿ : ಜನವರಿ 1982 – 7 ದಿನಗಳು

ಹಾಜರಿ : 5000 ಸ್ಕೌಟ್ ಗೈಡ್‌ಗಳು ಭಾಗವಹಿಸಿದ್ದರು.

ವಿಶೇಷ : ವಿಶ್ವ ಸ್ಕೌಟಿಂಗ್‌ನ ಪ್ಲಾಟಿನಂ ಮಹೋತ್ಸವ ಹಾಗೂ "ವೋಸಂ"ನ "ಸ್ಕೌಟ್ ವರ್ಷ" ಆಚರಣೆ.

**18ನೆಯ ರಾಜ್ಯ ಜಾಂಬೋರೇಟ್**

ಸ್ಥಳ : ಮೈಸೂರು

ಕಾಲಾವಧಿ : ಜನವರಿ 1985 – 6 ದಿನಗಳು

ಹಾಜರಿ : 3800 ಸ್ಕೌಟ್ ಗೈಡ್‌ಗಳು ಭಾಗವಹಿಸಿದ್ದರು.

ವಿಶೇಷ : ಅಂತಾರಾಷ್ಟ್ರೀಯ ಯುವ ವರ್ಷ ಮತ್ತು ವಿಶ್ವ ಗೈಡಿಂಗ್‌ನ ಪ್ಲಾಟಿನಂ ಮಹೋತ್ಸವ ಆಚರಣೆ ಸಿಕ್ಕಿಂ, ಹಿಮಾಚಲಪ್ರದೇಶ, ಹರ್ಯಾಣ, ಮಧ್ಯಪ್ರದೇಶ, ಪಾಂಡಿಚೇರಿ, ತಮಿಳ್ನಾಡು, ಆಂಧ್ರಪ್ರದೇಶ, ಕೇಂದ್ರೀಯ ವಿದ್ಯಾಲಯ, ಕೇರಳ ರಾಜ್ಯಗಳ ಪಾಲ್ಗೊಳ್ಳುವಿಕೆ.

**19ನೆಯ ರಾಜ್ಯ ಜಾಂಬೋರೇಟ್**

ಸ್ಥಳ : ಶಿವಮೊಗ್ಗ
ಕಾಲಾವಧಿ : ಡಿಸೆಂಬರ್ 1987 – 8 ದಿನಗಳು
ಹಾಜರಿ : 2250 ಸ್ಕೌಟ್ಸ್ & ಗೈಡ್ಸ್‌ಗಳು ಭಾಗವಹಿಸಿದ್ದರು.
ವಿಶೇಷ : ಇದೇ ಅವಧಿ ಜೊತೆಗೂಡಿದ್ದ ರಾಷ್ಟ್ರ ಸಂಸ್ಥೆಯ ದಕ್ಷಿಣ ಪ್ರಾದೇಶಿಕ ಸಮಾವೇಶ ಹಾಗೂ ಸಮೈಕ್ಯತಾ ಶಿಬಿರದಲ್ಲಿ ದೇಶದ 17 ರಾಜ್ಯಗಳಿಂದ ಬಂದ 1200 ಸ್ಕೌಟ್ಸ್ ಮತ್ತು ಗೈಡ್ಸ್ ಮತ್ತು ರಾಜ್ಯದ ವಿವಿಧ ಜಿಲ್ಲೆಗಳ 1050ಸ್ಕೌಟ್ಸ್ ಗೈಡ್ಸ್ ಸೇರಿ ಮೊತ್ತ 2250 ಮಕ್ಕಳು ಭಾಗವಹಿಸಿದ್ದರು . ಇದು ಶಿವಮೊಗ್ಗದಲ್ಲಿ 61 ವರ್ಷಗಳ ಬಳಿಕ ನಡೆದ 2ನೆಯ ಸಮಾವೇಶ.

**20ನೆಯ ರಾಜ್ಯ ಜಾಂಬೋರೇಟ್**

ಸ್ಥಳ : ಸುರತ್ಕಲ್, ದಕ್ಷಿಣ ಕನ್ನಡ ಜಿಲ್ಲೆ ಕಾಲಾವಧಿ : ಡಿಸೆಂಬರ್ 1990 – 6 ದಿನಗಳು
ಹಾಜರಿ : 5000 ಸ್ಕೌಟ್ಸ್ & ಗೈಡ್ಸ್‌ಗಳು ಭಾಗವಹಿಸಿದ್ದರು.
ವಿಶೇಷ : ಕರ್ನಾಟಕ ಕರಾವಳಿ ಪ್ರದೇಶದಲ್ಲಿ ನಡೆದ 2ನೆಯ ಸಮಾವೇಶ.

**21ನೆಯ ರಾಜ್ಯ ಜಾಂಬೋರೇಟ್**

ಸ್ಥಳ : ಕೋಲಾರ ಬಂಗಾರದ ಬಯಲು (ಕೆ.ಜಿ.ಎಫ್) ಕೋಲಾರ ದಕ್ಷಿಣ ಜಿಲ್ಲೆ
ಕಾಲಾವಧಿ : ಜನವರಿ 1993 – 6 ದಿನಗಳು
ಹಾಜರಿ : 4500 ಸ್ಕೌಟ್ಸ್ & ಗೈಡ್ಸ್‌ಗಳು ಭಾಗವಹಿಸಿದ್ದರು.

**22ನೆಯ ರಾಜ್ಯ ಜಾಂಬೋರೇಟ್**

ಸ್ಥಳ : ಬೀದರ್
ಕಾಲಾವಧಿ : ಜನವರಿ 1995 – 7 ದಿನಗಳು
ಹಾಜರಿ : 5000 ಸ್ಕೌಟ್ಸ್ & ಗೈಡ್ಸ್‌ಗಳು ಭಾಗವಹಿಸಿದ್ದರು.

**23ನೆಯ ರಾಜ್ಯ ಜಾಂಬೋರೇಟ್**

ಸ್ಥಳ : ತುಮಕೂರು
ಕಾಲಾವಧಿ : ಜನವರಿ 1997 – 7 ದಿನಗಳು
ಹಾಜರಿ : 8000 ಸ್ಕೌಟ್ಸ್ & ಗೈಡ್ಸ್‌ಗಳು ಭಾಗವಹಿಸಿದ್ದರು.
ವಿಶೇಷ : 41 ವರ್ಷಗಳ ಅಂತರದಲ್ಲಿ ನಡೆದ 3ನೆಯ ರಾಜ್ಯ ಜಾಂಬೋರೇಟ್ 20ನೆಯ ಶತಮಾನದ ಕೊನೆಯ ಜಾಂಬೋರೇಟ್.

**24ನೆಯ ರಾಜ್ಯ ಜಾಂಬೋರೇಟ್**

ಸ್ಥಳ : ಬೆಳಗಾವಿ
ಕಾಲಾವಧಿ : ಜನವರಿ 2001 – 7 ದಿನಗಳು
ಹಾಜರಿ : 4800 ಸ್ಕೌಟ್ಸ್ & ಗೈಡ್ಸ್‌ಗಳು ಭಾಗವಹಿಸಿದ್ದರು.
ವಿಶೇಷ : ಇದು 21ನೆಯ ಶತಮಾನದ ಮೊದಲ ರಾಜ್ಯ ಜಾಂಬೋರೇಟ್

**25ನೆಯ ರಾಜ್ಯ ಜಾಂಬೋರೇಟ್**

ಸ್ಥಳ : ದಾವಣಗೆರೆ
ಕಾಲಾವಧಿ : ಜನವರಿ 2006 – 7 ದಿನಗಳು
ಹಾಜರಿ : 5700 ಸ್ಕೌಟ್ಸ್ & ಗೈಡ್ಸ್‌ಗಳು ಭಾಗವಹಿಸಿದ್ದರು.
ವಿಶೇಷ : ದಕ್ಷಿಣ ಪ್ರಾಂತ್ಯ ರೈಲ್ವೆ ಮತ್ತು ಕೇರಳ ರಾಜ್ಯಗಳಿಂದ ಪ್ರತಿನಿಧಿಗಳು ಭಾಗವಹಿಸಿದ್ದರು. ಇದು ಕರ್ನಾಟಕ ರಾಜ್ಯ ಜಾಂಬೋರೇಟ್‌ಗಳ ರಜತೋತ್ಸವ.

**26ನೆಯ ರಾಜ್ಯ ಜಾಂಬೋರೇಟ್**

ಸ್ಥಳ : ತರಳು, ಸಿಆರ್‌ಪಿಎಫ್ ಕವಾಯತು ಮೈದಾನ, ಕಗ್ಗಲೀಪುರ, ಬೆಂಗಳೂರು–82
ಕಾಲಾವಧಿ : ಜನವರಿ 2011 – 7 ದಿನಗಳು
ಹಾಜರಿ : 8000 ಸ್ಕೌಟ್ಸ್ & ಗೈಡ್ಸ್‌ಗಳು ಭಾಗವಹಿಸಿದ್ದರು.

**27ನೆಯ ರಾಜ್ಯ ಜಾಂಬೋರೇಟ್**

ಸ್ಥಳ : ಡಾ॥ ಆನಿಬೆಸೆಂಟ್ ಸ್ಕೌಟ್ ಗೈಡ್ ರಾಜ್ಯ ತರಬೇತಿ ಮತ್ತು ಶಿಬಿರ ಕೇಂದ್ರ, ದೊಡ್ಡಬಳ್ಳಾಪುರ
ಕಾಲಾವಧಿ : ಜನವರಿ 2015 – 7 ದಿನಗಳು
ಗಮನಿಸಿ : ಲೇಖನದ ಕಾಲದಲ್ಲಿ 27ನೇ ಜಾಂಬೋರೇಟ್ ಸಿದ್ಧತೆ ಭರದಿಂದ ಸಾಗಿದೆ.

***"The Scoutmaster must be alert to check badge hunting as compared to badge earning."***



# ಸ್ಕೂಲ್ ಮಾಸ್ಟರ್ - ಸ್ಕೌಟ್ ಮಾಸ್ಟರ್

ಎಂ.ಎಂ. ಲೋಂಡೆ
ಜಿಲ್ಲಾ ಮುಖ್ಯ ಆಯುಕ್ತರು, ಧಾರವಾಡ

'ಸ್ಕೂಲ್ ಮಾಸ್ಟರ್' ಆಗುವ ಭಾಗ್ಯ ಎಲ್ಲರಿಗೂ ಸಿಗದು. 'ಪಡೆದು ಬಂದಿರಬೇಕು ಗುರುದೇವ' ಅಂದಹಾಗೆ ಯಾವುದೋ ಜನ್ಮದ ಪುಣ್ಯದ ಫಲ. ಅನೇಕ ಮಕ್ಕಳೆದುರು ನಿಂತು ಅವರನ್ನು ಸಮಾಧಾನ ಪಡಿಸಿ ಅವರ ಚಂಚಲ ಮನಸ್ಸನ್ನು ನಮ್ಮಕಡೆಗೆ ಆಕರ್ಷಿಸಿ, ವಿಷಯದ ವಿವರಣೆ - ಪಾಠದ ವಿವರಣೆ ಕೊಡುತ್ತ ಮಕ್ಕಳ ಮನಸ್ಸನ್ನು ಗೆಲ್ಲುವುದು, ಅವರ ಮನಸ್ಸಿನಲ್ಲಿರುವ ಅನೇಕ ವಿಚಾರಗಳ ಗೊಂದಲದಿಂದ ಅವರ ಮನಸ್ಸನ್ನು ನಮ್ಮ ಕಡೆಗೆ ಆಕರ್ಷಿಸುವುದು. ಇದು ಅಷ್ಟೊಂದು ಸುಲಭವಲ್ಲ, ಎಲ್ಲರಿಗೂ ಸಾಧ್ಯವೂ ಇಲ್ಲ. ಈ ಕೆಲಸ ಒಂದು ದಿನ, ಒಂದು ವಾರ, ಒಂದು ತಿಂಗಳು, ಒಂದುವರ್ಷ, ಅಷ್ಟೇ ಅಲ್ಲಾ ನಮ್ಮ ನಿವೃತ್ತಿಯವರೆಗೂ ಈ ಕೆಲಸ ನಡೆದೇ ಇರುತ್ತದೆ. ಪ್ರತಿ ತಿಂಗಳ ಮಕ್ಕಳ ಪ್ರಗತಿ ಅಭ್ಯಾಸದ ಮುನ್ನಡೆ. ಹೊಸ ಹೊಸ ವಿಚಾರಗಳು ಮಕ್ಕಳ ಮನಸ್ಸನ್ನು ಸಂತಸದ ಅಲೆಗಳು, ಸಾಧನೆಯ ನಂತರ ಮಕ್ಕಳ ಹಸನ್ಮುಖಗಳು ಅವರಲ್ಲಿಯ ಹಾಸ್ಯ- ಸಂತಸ- ತೀಟೆ - ಗಲಾಟೆ- ಎಲ್ಲವೂ ಶಾಲಾ ಜೀವನದಲ್ಲಿ ಕೂಡಿ ಮಕ್ಕಳ ಜೀವನಕ್ಕೆ ಹೊಸ ಚೈತನ್ಯ ತುಂಬುತ್ತದೆ.

ಸ್ಕೌಟ್ ಮಾಸ್ಟರ್ ಆದರೆ ಸ್ಕೂಲ್ ಮಾಸ್ಟರ್ ಗಿಂತ ಹೆಚ್ಚಿನ ಜವಾಬ್ದಾರಿ. ಸ್ಕೂಲ್ ಅಭ್ಯಾಸದ ಜೊತೆ ಜೊತೆಗೆ ಆಟ ಪಾಠದ ಸಿದ್ಧತೆ ಇದೊಂದು ಹೆಚ್ಚಿನ ಭಾರ-ಆದರೂ ಮನಸ್ಸು ವಿಚಲಿತವಾಗದು. ಭಾರಹೆಚ್ಚಾದಂತೆ, ಸ್ಕೂಲ್ ಕೆಲಸ ಹೆಚ್ಚಾದಂತೆ ಮತ್ತೆ ಹೆಚ್ಚಿನ ಜವಾಬ್ದಾರಿ ಬರುತ್ತದೆ. ಸ್ಕೂಲ್‌ನಲ್ಲಿ ಮಕ್ಕಳು ಪ್ರಗತಿಪರ ಪಾಠ ವರದಿ-ಮಕ್ಕಳ ಪ್ರಗತಿ, ಆಗಾಗ ಪಾಲಕರಿಂದ ತಕರಾರು ಇದರ ಜೊತೆಗೆ-ಸ್ಕೌಟ್‌ಲ್ಲಿ ಸೇರಿದ ತಮ್ಮ ಮಗುವಿನ ಪ್ರಗತಿ ಬಗೆಗೆ ಬಾಲಕರಲ್ಲಿ ಆಗಾಗ ಸ್ವಲ್ಪ ಆತಂಕ- ಲೋಲೂಕ ಜಿಲ್ಲೆ ರಾಜ್ಯ-ರಾಷ್ಟ್ರ ಶಿಬಿರ- ಜಾಂಬೋರೆಟ್ ಮಕ್ಕಳು ಭಾಗವಹಿಸುವ ಕಾರಣ ಮಕ್ಕಳಲ್ಲಿ ಉತ್ಸಾಹ-ಸಂತೋಷ-ಶಾಲೆಯ ಚಟುವಟಿಕೆಗಳಿಗೆ ಒಂದು ಮೆರಗು. ಅಭ್ಯಾಸದಲ್ಲಿ ಸ್ವಲ್ಪಕಡಿಮೆ ಆದರೆ. ರಜಾದಿನಗಳಲ್ಲಿ ಅಭ್ಯಾಸಮುಗಿಸಬೇಕೆಂಬ ವಿಚಾರ. ಏನೇ ಆದರೂ ಸ್ಕೌಟ್ ಜೊತೆಗೆ ಸ್ಕೌಟ್ ಮಕ್ಕಳು ಶಾಲಾ ಅಭ್ಯಾಸದಲ್ಲಿ ಎಂದೂ ಹಿಂದೆ ಬೀಳಬಾರದೆಂಬ ದೃಢವಾದ ನಂಬಿಕೆ. ಪಾಲಕರಿಗೆ ಸಂತೋಷ-ತಮ್ಮ ಮಕ್ಕಳು ಸ್ಕೌಟ್ ಜೊತೆಗೆ ಅಭ್ಯಾಸವನ್ನು ಚೆನ್ನಾಗಿ ಮಾಡುತ್ತಿದ್ದಾರೆಂಬ ವಿಶ್ವಾಸ ಮಕ್ಕಳ ಪ್ರಗತಿಗೆ ಸ್ಕೂಲ ಜೊತೆಗೆ ಸ್ಕೌಟ್ ತರಬೇತಿ ಪೂರಕವಾಗಿದೆ ಎಂಬ ವಿಶ್ವಾಸ ಪಾಲಕರಲ್ಲಿ ಮಾಡುವುದು.

ಸ್ಕೂಲ್ ಮಾಸ್ಟರ್ ಸ್ಕೌಟ್ ಮಾಸ್ಟರ್ ಕೆಲಸ ಇದೊಂದು ಬಿಡುವಿಲ್ಲದ ಬಿಡಲಾರದ ಬಗೆಬಗೆಯ ಬಂಧನಗಳಿಂದ ಕೂಡಿ ಹಾಕಿದ ಒಂದು ಆಟ ಅತ್ಯುತ್ತಮ ಪಾಠ. ಮಕ್ಕಳೊಂದಿಗೆ ಹರ್ಷ ಚಿತ್ತರಾಗಿ ಮತ್ತೆ ಮತ್ತೆ ಹೊಸ ಚಟುವಟಿಕೆಗಳತ್ತ ವಿವಿಧ ಕರೆಗಳತ್ತ ಗಮನ ಕೊಡುತ್ತ ಮಕ್ಕಳ ಜೊತೆಗೆ ಹಸನ್ಮುಖರಾಗುತ್ತ ಇರುವುದು ಸ್ಕೌಟಿಂಗನ ಒಂದು ಮಹತ್ವ. ಸ್ಕೌಟ ಮಾಸ್ಟರ ಸ್ಕೂಲ್ ಮಾಸ್ಟರರಾಗಿ ಮಕ್ಕಳೊಡನೆ ವಿವಿಧ ಚಟುವಟಿಕೆಗಳಲ್ಲಿ ತನ್ನನ್ನು ತಾನು ತೊಡಗಿಸಿಕೊಂಡು ಸ್ಕೌಟ್ ಪ್ರತಿಜ್ಞೆ ನಿಯಮ ಧ್ಯೇಯ ಉದೇಶವನ್ನು ಅರ್ಥ ಮಾಡಿಕೊಂಡು ಮಕ್ಕಳಲ್ಲಿ ಕೊನೆಯ ವರೆಗೂ ಉಳಿಯುವಂತೆ ಕಲಿಸುವ ಸ್ಕೂಲ್ ಮಾಸ್ಟರ್ ಸ್ಕೌಟ್ ಮಾಸ್ಟರ್ ನಿಜಕ್ಕೂ ಮಕ್ಕಳ ಪ್ರಗತಿಗೆ ಬದುಕು ಸಾರ್ಥಕ ಶಾಲೆ, ಸಮಾಜ, ರಾಷ್ಟ್ರಕ್ಕೆ ಪೂರಕ.



Robert Baden-Powell with some oversea scouts at the Imperial Jamboree at Olympia, London.



# ಒಂದು ನೆನಪು - ಧೈರ್ಯಂ ಸರ್ವತ್ರ ಸಾಧನಂ

ಶ್ರೀಮತಿ ಬಿ.ಡಿ. ಶಾಂತ
ಎಲ್.ಟಿ. (ಗೈಡ್ಸ್) ಸಹಾಯಕ ರಾಜ್ಯ ಆಯುಕ್ತರು ಗೈಡ್ಸ್ (ಪ್ರಕಟಣೆಗಳು)

ಹಿಂದಿನ ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲಿ ರಾಮನಗರ ಒಂದು ಸ್ಥಳೀಯ ಸಂಸ್ಥೆ. ನಾನು ರಾಮನಗರದ ಭಾರತೀಯ ಸಂಸ್ಕೃತಿ ವಿದ್ಯಾಪೀಠ ಶಾಲೆಯಲ್ಲಿ ಸಮಾಜಶಾಸ್ತ್ರ ಶಿಕ್ಷಕಿಯಾಗಿ ಕೆಲಸ ಮಾಡುತ್ತಿದ್ದೆ. ಜೊತೆಗೆ ಥ್ರೋಬಾಲ್, ಷಟಲ್, ಬ್ಯಾಂಡ್ ಮಿಂಟನ್‌ನ ಆಟಗಾರ್ತಿಯಾಗಿದ್ದೆ. ಒಂದು ದಿನ ನಮ್ಮ ಶಾಲೆಗೆ ಗೈಡ್ ತರಬೇತಿಯ ಸುತ್ತೋಲೆ ಬಂದಿತ್ತು. ಮುಖ್ಯೋಪಾಧ್ಯಾಯರು ನನ್ನನ್ನು ಕರೆದು ಶಾಲೆಯಲ್ಲಿ ಒಂದು ಚಟುವಟಿಕೆಯಾಗುತ್ತೆ. ಈ ತರಬೇತಿ ತೆಗೆದುಕೊಳ್ಳಿ ಎಂದರು. ಅನೇಕ ಪ್ರಶ್ನೆಗಳೊಡನೆ ತರಬೇತಿಗೆ ಹೋದೆ. ತರಬೇತಿ ಇಷ್ಟವಾಯಿತು. ದಳ ತೆರೆದೆ, ಅದು ಗ್ರಾಮಾಂತರ ಜಿಲ್ಲೆಯ ಪ್ರಥಮ ಗೈಡ್‌ದಳ ವೆಂಬ ಹೆಗ್ಗಳಿಕೆಗೆ ಪಾತ್ರವಾಯಿತು. 10 ಮಕ್ಕಳಿಗೆ ಗೈಡ್ ತರಬೇತಿ ನೀಡಿದ ಸ್ಫೂರ್ತಿಯ ಸೆಲೆಯಾಗಿ 35 ವರ್ಷಗಳು ನಿರಂತರವಾಗಿ ಹರಿದು, ಪ್ರಗತಿಪರ ತರಬೇತಿ ಪಡೆದು ಗ್ರಾಮಾಂತರ ಮಕ್ಕಳು, ಜಿಲ್ಲೆ, ರಾಜ್ಯ, ರಾಷ್ಟ್ರ, ಅಂತರರಾಷ್ಟ್ರೀಯ ಕಾರ್ಯಕ್ರಮಗಳಲ್ಲಿ ಭಾಗವಹಿಸಿ ಕರ್ನಾಟಕ ಸ್ಕೌಟ್ ಮತ್ತು ಗೈಡ್ ಇತಿಹಾಸದಲ್ಲಿ ಛಾಪು ಮೂಡಿಸಿದ ಕ್ಷಣಗಳು ವರ್ಣನಾತೀತವಾದದು.

ಗೈಡಿಂಗ್‌ನಲ್ಲಿ ''ಹೈಕ್'' - (''ಹೊರ ಸಂಚಾರ'') ಎಲ್ಲರಿಗೂ ಇಷ್ಟವಾದ ಕಾರ್ಯಕ್ರಮ. ಈ ಕಾರ್ಯಕ್ರಮದಲ್ಲಿ ದಾರಿ ಪತ್ತೆಹಚ್ಚುವುದು, ಪ್ರಕೃತಿ ಅಧ್ಯಯನ, ಬೆಟ್ಟ ಗುಡ್ಡ ಹತ್ತಿಳಿಯುವುದು, ಅಡಿಗೆ ಮಾಡುವುದು ಕೆಲವು ಬಾರಿ ಗೈಡ್ ಕೌಶಲ್ಯಗಳ ಪರೀಕ್ಷೆಯು ನಡೆಯುತ್ತದೆ. ದಳ ನಾಯಕ ನಾಯಕಿಯರಿಗೆ ಜವಾಬ್ದಾರಿಯ ಪರೀಕ್ಷೆಯೂ ಕೂಡ ಜೊತೆಗೆ ಒಮ್ಮೆ 15 ಗೈಡ್‌ಗಳನ್ನು ಕರೆದುಕೊಂಡು ಹೊರಸಂಚಾರಕ್ಕೆ ಸಾವನದುರ್ಗಕ್ಕೆ ಹೋಗಿದ್ದೆ. ನನ್ನ ಜೊತೆ ಸಹಾಯಕ್ಕಾಗಿ ದೈಹಿಕ ಶಿಕ್ಷಕರಾದ ಶ್ರೀ ನಾರಾಯಣ ಭಂಡಾರಿಯವರು ಬಂದಿದ್ದರು. ಸರಿ ಸಾವನ್‌ದುರ್ಗಕ್ಕೆ ಹೋಗಿ ನರಸಿಂಹಸ್ವಾಮಿಯ ದರ್ಶನ ಮಾಡಿ ಬೆಟ್ಟದ ತಪ್ಪಲಿಗೆ ಹೋದೆವು ಧ್ವಜವಂದನೆ ಮಾಡಿ ಗುಂಪುಗಳಿಗೆ ಗುಡಾರ ಕಟ್ಟುವ ಕೆಲಸವಹಿಸಿದೆವು. ನಂತರ ಅಡುಗೆ ಪ್ರಾರಂಭವಾಯಿತು. 2 ಅಷ್ಟಕಗಳು ಚಿತ್ರಾನ್ನ, ಚಹ ಇತ್ಯಾದಿಗಳನ್ನು ತಯಾರಿಸಿದರು. ಉಪಾಹಾರ ಮುಗಿಸಿ ಬೆಟ್ಟ ಹತ್ತಲು ಪ್ರಾರಂಭಿಸಿದೆವು. ನಾನು ಮಕ್ಕಳಿಗೆ ಪ್ರಕೃತಿ ಪರಿಚಯಿಸುವುದರಲ್ಲಿ ಮಗ್ನಳಾದೆ. ದೈಹಿಕ ಶಿಕ್ಷಕರು ಮತ್ತೊಂದು ಕಡೆಯಿಂದ ಬೆಟ್ಟ ಹತ್ತಿ ಹೋಗಲು ಸ್ವಲ್ಪ ದೂರ ಹೋಗಿದ್ದರು. ನನಗೆ ತಿಳಿಸದೆ ಇಬ್ಬರು ಬಾಲಕಿಯರು ಮೇಷ್ಟ್ರು ಹೊರಟ ದಿಕ್ಕಿಗೆ, ಅವರಿಗಿಂತ ಮುಂದೆ ಹೋಗುವ ಹುಮ್ಮಸ್ಸಿನಲ್ಲಿ ಒಬ್ಬಳು ಕಾಲು ಜಾರಿ ಉರುಳಿ ಕೆಳಗೆ ಬಿದ್ದಳು. ಇನ್ನೊಬ್ಬಳು ಕಿರುಚಿ ಕೊಂಡೇ ಅಲ್ಲಿನ ಮರದ ಕೊಂಬೆ ಹಿಡಿದು ನಿಂತಳು. ಸ್ವಲ್ಪ ಸಮಯದಲ್ಲೇ ಇಬ್ಬರು ಹುಡುಗಿಯರು ಇರಲಿಲ್ಲ ಎಂಬುದು ಗಮನಕ್ಕೆ ಬಂತು. ನಾವು ಹುಡುಕಾಡಲು ಶುರು ಮಾಡಿದೆವು. ಗಾಬರಿಯಾಗಿ ಎಲ್ಲೆಡೆ ಹುಡುಕಿ ಇಳಿದು ಬಂದೆವು ಪೂರ್ಣಿಮಾ, ಗಾಬರಿಯಾಗಿ ಅಳುತ್ತಿದ್ದಳು. ಉರುಳಿದ ಪದ್ಮಳನ್ನು ಮೇಷ್ಟ್ರು ತಮ್ಮ ಮೋಟರ್ ಬೈಕ್‌ನಲ್ಲಿ ಡಾಕ್ಟರ್‌ಹತ್ತಿರ ಕರೆದು ಕೊಂಡು ಹೋಗಿ ತಲೆಗೆ ಬಿದ್ದಗಾಯಕ್ಕೆ ಪಟ್ಟಿ ಕಟ್ಟಿಸಿಕೊಂಡು ಬಂದಿದ್ರು. ನನಗೆ ಗಾಬರಿಯಾಯಿತು. ಅವಳು ಮಾತನಾಡಿದ ಮೇಲೆ ಸಮಾಧಾನವಾಯಿತು. ಇದೊಂದು ಮರೆಯಲಾಗದ ಅನುಭವ. ನಾನು ಪದ್ಮಳಿಗೆ ''ವಾಹನದಲ್ಲಿ ನಿನ್ನನ್ನು ರಾಮನಗರಕ್ಕೆ ಈಗಲೇ ಕಳುಹಿಸಿಕೊಡುತ್ತೇನೆ ಭಯ ಪಡಬೇಡ'' ಎಂದು ಹೇಳಿದೆ. ಅದಕ್ಕೆ ಪದ್ಮ ಕೊಟ್ಟ ಉತ್ತರ ''ನಾನು ಎಲ್ಲರ ಜೊತೆಯಲ್ಲೇ ಇದ್ದು ಅವರೊಂದಿಗೆ ಹೋಗುತ್ತೇನೆ. ನನಗೆ ಏನೂ ಆಗಿಲ್ಲ''. ಎಂದಳು ಈ ದೃಢ ನಿರ್ಧಾರವನ್ನು ಕೇಳಿ ಮನಸ್ಸಿನಲ್ಲಿಯೇ ಸಂತೋಷ ವಾಯಿತು. ಇದೇ ಅಲ್ಲವೆ ನಿಜವಾದ ''ಗೈಡಿಂಗ್ ಸ್ಪಿರಿಟ್''.

ಹೈಕ್ ಮುಗಿಸಿ ರಾಮನಗರಕ್ಕೆ ಬರುತ್ತಿದ್ದಂತೆಯೇ ಪೋಷಕರನ್ನು ಎದುರಿಸುವ ಭಯ. ಅಂತೂ ಪೋಷಕರು ಬಂದರು. ತಾಯಿ ಮಗಳನ್ನು ನೋಡಿ ಜೋರಾಗಿ ಅತ್ತರು. ಮಗಳು ಅವರನ್ನು ಸಮಾಧಾನ ಮಾಡುತ್ತಾ ''ನನಗೆ ಏನೂ ಆಗಿಲ್ಲ. ಹೊರ ಸಂಚಾರವಮ್ಮ, ಇದೆಲ್ಲ ಇಲ್ಲದೆ ರೋಮಾಂಚಕಾರಿಯಾಗಿರುವುದಿಲ್ಲ'' ಎಂದಳು. ಮಗಳ ಮಾತನ್ನು ಕೇಳಿ ಅವರಿಗೆ ಸಮಾಧಾನವೂ ಸಂತೋಷವೂ ಆಯಿತು. ''ಗೈಡ್ ಧೈರ್ಯವಂತಳು'' ಎಂಬ ನಿಯಮಕ್ಕೆ ಪದ್ಮ ಒಂದು ಸಾಕ್ಷಿಯಾದಳು!

ನನ್ನ ನೆನಪಿನಲ್ಲಿ ಅಚ್ಚಳಿಯವೇ ಉಳಿದ ಈ ಘಟನೆಯು ನನಗೆ ಇನ್ನೂ ಹೆಚ್ಚು ಎಚ್ಚರಿಕೆಯಿಂದ ಇರಬೇಕೆಂಬ ಪಾಠ ಕಲಿಸಿತ್ತು. ನಾನು ತರಬೇತು ದಾರಳಾಗಿ ನಡೆಸುವ ಅನೇಕ ತರಬೇತಿ ಶಿಬಿರಗಳಲ್ಲಿ ಈ ಘಟನೆಯನ್ನು ನೆನಪಿಸಿಕೊಳ್ಳುತ್ತೇನೆ. ಗೈಡ್‌ಗಳಿಗೆ ಅವಳಂತೆ ಧೈರ್ಯವಾಗಿರಬೇಕೆಂದೂ ಮತ್ತು ಗೈಡ್ ದಳ ನಾಯಕಿಯರಿಗೆ ಪ್ರತಿ ''ಹೊರ ಸಂಚಾರ'' ದಲ್ಲೂ ಹೇಗೆ ಜಾಗರೂಕತೆಯಿಂದ ಗೈಡ್‌ಗಳ ಮೇಲೆ ಕಣ್ಣಿಟ್ಟಿರ ಬೇಕೆಂಬುದನ್ನು ತಿಳಿಸುತ್ತೇನೆ. ಹಾಗೂ ಅವಘಡವಾದಾಗ ಹೇಗೆ ಧೈರ್ಯದಿಂದ ನಿಭಾಯಿಸಬೇಕೆಂದೂ ತಿಳಿಸುತ್ತೇನೆ. ''ಧೈರ್ಯಂ ಸರ್ವತ್ರ ಸಾಧನಂ'' ಅಲ್ಲವೇ.



# ಆಹಾ.....ಜಾಂಬೋರೇಟ್

ಶ್ರೀಮತಿ ಛಾಯಾ. ಎನ್.ಕೆ.
ಎಲ್.ಟಿ.(ಗೈಡ್ಸ್) - ರಾಜ್ಯಸ್ಥಾನಿಕ ಆಯುಕ್ತರು ಗೈಡ್ಸ್ (ತರಬೇತಿ)

ಜಾಂಬೋರೇಟ್ ಎಂಬ ಪದ ಸ್ಕೌಟ್-ಗೈಡ್ ಸಂಸ್ಥಾಪಕರಾದ ಬಿ.ಪಿ.ಯವರು ರಚಿಸಿದ ಪದ. ಇದು ಟ್ರಾಫಿಕ್ ಜಾಮ್ ಇದ್ದಂತೆ ಸ್ಕೌಟ್-ಗೈಡ್‌ಗಳ ದಟ್ಟಣೆ. ಇದೊಂದು ಪುಟ್ಟಪ್ರಪಂಚ. ಈ ಸ್ಕೌಟ್-ಗೈಡ್ ಮೇಳದಲ್ಲಿ ಏನೇನಿಲ್ಲ! ಈ ವ್ಯವಸ್ಥಿತ ಮೇಳದಲ್ಲಿ ಶಿಸ್ತು, ಸಂಭ್ರಮ, ವೈವಿಧ್ಯಮಯ, ಕೌಶಲ್ಯಗಳು, ಚಟುವಟಿಕೆಗಳು, ಮೋಜು, ಮಜ, ಸಾಹಸ, ಹೊರ ಸಂಚಾರ, ಚಾರಣ, ಪ್ರತಿಭಾ ಪ್ರದರ್ಶನ, ಸಾಂಸ್ಕೃತಿಕ ಮೆರವಣಿಗೆ, ಕವಾಯತು, ಒಂದೇ ಎರಡೇ! ಇಲ್ಲಿನ ಅದ್ಭುತ ಜೀವನ ನಮ್ಮನ್ನು ಬೇರೆಯದೇ ಲೋಕಕ್ಕೆ ಕರೆದೊಯ್ಯುವುದು.

ಹೊಸಕಲಿಕೆ, ಹೊಸಗೆಳೆತನ ಆನಂದವನ್ನು ಕೊಳ್ಳುಕೊಡುವುದೇ. ಈ ಮೇಳದ ವಿಶೇಷತೆ. ಇದು ಬರಿಯ ಸ್ಕೌಟ್ ಗೈಡ್‌ಗಳಿಗೆ ಮಾತ್ರವಲ್ಲ. ಅವರ ಶಿಕ್ಷಕರು ತಮ್ಮ ವಯಸ್ಸು ಮರೆತು ನಲಿದಾಡುವ ಹಾಗೂ ಮತ್ತೊಂದು ಜಾಂಬೋರೇಟ್‌ಗಾಗಿ ಕಾಯುತ್ತಾರೆ ಈ ಹಬ್ಬ ಮೂರುವರ್ಷಕ್ಕೊಮ್ಮೆ ಬರುತ್ತದೆ.

''ಎಲ್ಲಾ ಭೇದಭಾವ ಮರೆತು ಬನ್ನಿರಿ ನಾವು ಸಮಾನ'' ಎಂದು ಭಾಷೆ, ಜಾತಿ, ಮತ, ಬಡತನ ಸಿರಿತನವನ್ನು ಮರೆತು ಎಲ್ಲರೂ ಸೇರುವ ಒಂದು ಅನನ್ಯ ಭಾವದ ಸಮಾರಂಭ.

ಈ ಮೇಳದಲ್ಲಿ ಸಾರ್ವಜನಿಕರು, ಹಿತೈಷಿಗಳು, ಆಹ್ವಾನಿತರು, ಅತಿಥಿಗಳು, ದಿನಪೂರ್ತಿ ಮೇಳ ನಗರಿಯಲ್ಲಿ ಮಕ್ಕಳ ಚಟುವಟಿಕೆಗಳನ್ನು ನೋಡುವುದೇ ಒಂದು ಚಂದ!

ಅದೊಂದು ಅದ್ಭುತ ಪ್ರಪಂಚ ಅಲ್ಲವೇ? ಮತ್ತೆ ನೋಡಲು ಮುಂದಿನ ಜಾಂಬೋರೇಟ್‌ಗಾಗಿ ಕಾಯೋಣ!



# ಸ್ಕೌಟ್ಸ್ ಮತ್ತು ಗೈಡ್ಸ್‌ಗಳ ಮನದ ಮಾತುಗಳು

ನೇರ ಸಂದರ್ಶನ - ಸಂದರ್ಶಿಸಿದವರು - ಶ್ರೀಮತಿ ಎಸ್.ಕೆ. ಪ್ರಭ
ಜಂಟಿ ರಾಜ್ಯ ಕಾರ್ಯದರ್ಶಿ (ಗೈ)

ಬಾಲ್ಯದಲ್ಲಿ ಕಲಿತ ಜ್ಞಾನ, ಚಟುವಟಿಕೆಗಳು, ನೋವು ನಲಿವುಗಳು, ವಿದ್ಯೆ ಮತ್ತು ಸೃಜನಶೀಲತೆ ವ್ಯಕ್ತಿಯ ಜೀವನುದ್ದುಕ್ಕೂ ಪ್ರಭಾವಬೀರುತ್ತದೆ. ಮಕ್ಕಳ ಮನಸ್ಸು ಮುರಿದುಹೋಗದೆ ಅರಳುವ ಪ್ರತಿಭೆಗಳಾಗಲು ಹಿರಿಯರ ಮತ್ತು ಶಿಕ್ಷಕರ ಪಾತ್ರ ಮಹತ್ತರವಾದುದು. ಪಠ್ಯೇತರ ಚಟುವಟಿಕೆಗಳ ಮಕ್ಕಳಲ್ಲಿ ಅಡಗಿರುವ ಸುಪ್ತ ಚೇತನವನ್ನು ಹೊರಗೆಡುಹುದರಲ್ಲಿ ಮುಖ್ಯ ಪಾತ್ರವಹಿಸುತ್ತದೆ. ಈ ದಿಶೆಯಲ್ಲಿ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಚಳವಳಿಯು ತನ್ನದೇ ಆದ ಛಾಪನ್ನು ಮೂಡಿಸುವುದರ ಜೊತೆಗೆ ವ್ಯಕ್ತಿ ವಿಕಸನದತ್ತ ತನ್ನ ಕಾರ್ಯರೂಪಕ್ಕಿಳಿಸುತ್ತದೆ. ಶಿಬಿರವಾಸದಂತಹ ಮುಕ್ತ ಸನ್ನಿವೇಶಗಳಲ್ಲಿ ಸ್ಕೌಟ್ಸ್ ಮತ್ತು ಗೈಡ್ಸ್‌ಗಳಲ್ಲಿನ ಅಭಿಪ್ರಾಯಗಳನ್ನು ಅನಿಸಿಕೆಗಳನ್ನು ತಿಳಿಯುವ ಉದ್ದೇಶದಿಂದಲೂ, ಸ್ಕೌಟ್ಸ್ ಮತ್ತು ಗೈಡ್ಸ್ ಚಳವಳಿಯ ಸತ್ಪ್ರಯೋಜನಗಳನ್ನು ಅರಿಯುವ ನಿಮಿತ್ತ ನಾನು ಕೆಲವು ಶಾಲೆಗಳ ಸ್ಕೌಟ್ಸ್ ಮತ್ತು ಗೈಡ್ಸ್‌ಗಳ ಪ್ರತಿಕ್ರಿಯೆಗಳನ್ನು, ಭಾವನೆಗಳನ್ನು ನೇರ ಸಂದರ್ಶನದ ಮೂಲಕ ಸಂಗ್ರಹಿಸಿದ್ದೇನೆ. ಅದರ ಕಿರುಪರಿಚಯವನ್ನು ಸಂಕ್ಷಿಪ್ತವಾಗಿ ಹಂಚಿಕೊಳ್ಳಲು ಇಚ್ಛಿಸುತ್ತೇನೆ.

ಪ್ರಶ್ನೆ: ಸ್ಕೌಟ್ಸ್ ಮತ್ತು ಗೈಡ್ಸ್‌ಗಳೇ ನೀವು ಸ್ಕೌಟಿಂಗ್ ಮತ್ತು ಗೈಡಿಂಗನ್ನು ಏಕೆ ಇಷ್ಟಪಡುತ್ತೀರಿ? ನಿಮಗೆ ಇದರಿಂದ ಉಪಯೋಗಗಳೇನು? (Why do you like Scouting and Guiding? What are the uses of Scouting and Guiding?

**ಉತ್ತರ: ಕೆ. ಕಾರ್ತಿಕ್ ಹೆಬ್ಬಾರ್ ಉಡುಪಿ ಜಿಲ್ಲೆ**

ನಾಲ್ಕು ಗೋಡೆಯ ಮಧ್ಯೆ ನಮ್ಮ ಶಾಲಾಕಲಿಕೆ ನಡೆಯುತ್ತದೆ. ಆದರೆ ಸ್ಕೌಟಿಂಗ್ ನಾಲ್ಕಾರು ಮರಗಳ ಮಧ್ಯೆ, ಪ್ರಕೃತಿಮಡಿಲಲ್ಲಿ ಕಲಿಕೆ ಸಾಗುತ್ತದೆ. ಸ್ಕೌಟಿಂಗ್ ಶಿಸ್ತು, ಸಹಬಾಳ್ವೆ, ಮೌಲ್ಯಗಳ ಅರಿವು, ನಾಯಕತ್ವದ ಪಾಠವನ್ನು ಕಲಿಸುತ್ತದೆ. ಸ್ಕೌಟಿಂಗ್ ಬದುಕಿಗೆ ಬೇಕಾದ ವಿವಿಧ ಕೌಶಲಗಳನ್ನು ಕಲಿಸಿಕೊಡುವ 'ಬ್ಯಾಂಕ್' ಎಂದರೆ ತಪ್ಪಾಗದು. ಹಣವನ್ನು ಬ್ಯಾಂಕಿನಿಂದ ಬೇಕಾದಾಗ ಪಡೆದಂತೆ. ಸ್ಕೌಟಿಂಗ್‌ನಿಂದ ಕಲಿತ ಮೌಲ್ಯಗಳನ್ನು ಬೇಕಾದಾಗ ಬಳಸಿಕೊಳ್ಳಬಹುದು. ಇಲ್ಲಿ ಟೆಂಟ್‌ವಾಸ ವ್ಯಾಯಾಮ, ಮಳೆ, ಚಳಿ, ಬಿಸಿಲಿಗೆ ಸವಾಲೆನಿಸುವ ಶೌರ್ಯ, ಧೈರ್ಯವನ್ನು ಕಲಿತುಕೊಳ್ಳುತ್ತೇವೆ. ಐಕ್ಯತೆಯ ಬಾಳು ನಮಗೆ ಎಂದೆಂದೂ ಸಹಕಾರಿ.

**ಗೈಡ್: ಕಾಜಲ ರಾಜು ಪವಾರ - ಬೆಳಗಾವಿ ಜಿಲ್ಲೆ**

ಗೈಡಿಂಗ್‌ನಿಂದ ಹೊಸ ಸ್ನೇಹಿತೆಯರ ಪರಿಚಯವಾಗುತ್ತದೆ. ಶಿಬಿರವಾಸ ಅದ್ಭುತವಾಗಿರುತ್ತದೆ. ಮನೆಗಳಲ್ಲಿ ವಾಸಿಸುವ ನಮಗೆ ಗುಡಾರದೊಳಗೆ ವಾಸಿಸುವ ಪರಿವಿಭಿನ್ನವಾದ ಅನುಭವ ನೀಡುತ್ತದೆ. ರಾಜ್ಯಪುರಸ್ಕಾರ, ರಾಷ್ಟ್ರಪತಿ ಗೈಡ್ ಪದಕಗಳ ಗಳಿಕೆಯು ಮುಂದಿನ ವಿದ್ಯಾಭ್ಯಾಸಕ್ಕೂ ಉಪಯೋಗಕರ ವಾಗಿರುತ್ತದೆ.

**Scout : Dhanush P. Naik- Hassan District**

I like Scouting because we learn so many qualities like self-discipline, helping nature, good habits, unity and brotherhood. We also improve our knowledge. We get chance to attend camps so that we can take part in all the activities of the camping.

**ಗೈಡ್ : ಸಿಂಚನ. ಉ - ಶಿವಮೊಗ್ಗ ಜಿಲ್ಲೆ**

ಗೈಡಿಂಗ್ ಸದಾ ಚಟುವಟಿಕೆಯಿಂದ ಕೂಡಿರುತ್ತದೆ. ಇಲ್ಲಿ ಸೋಮಾರಿತನಕ್ಕೆ ಎಡೆಯೇ ಇಲ್ಲ. ಧೈರ್ಯ ಸನ್ನಡತೆ, ಶಾಂತಿಸಂದೇಶ (message of peace) ಗಳನ್ನು ತಿಳಿಯುತ್ತೇವೆ. ನನ್ನ ಮಾತಿನಲ್ಲಿ ಹೇಳುವುದಾದರೆ ಗೈಡಿಂಗ್‌ನಲ್ಲಿ ನೀವು ''ಏನಿದೆ'' ಎಂದು ಕೇಳುವ ಬದಲು ''ಏನಿಲ್ಲ'' ಎಂದು ಕೇಳಿ! ಸರ್ವತೋಮುಖ ಬೆಳವಣಿಗೆಗೆ ಗೈಡಿಂಗ್ ಸಹಕಾರಿಯಾಗಿದೆ.

**ಸ್ಕೌಟ್: ಮೊಹಮ್ಮದ್ ಇಮ್ರಾನ್ - ಚಿತ್ರದುರ್ಗ ಜಿಲ್ಲೆ**

ಸ್ಕೌಟಿಂಗ್‌ನಿಂದ ನಮ್ಮ ಮನಸ್ಸಿನ ಮತ್ತು ದೈಹಿಕ ಚಟುವಟಿಕೆಗಳು ಅತ್ಯುತ್ತಮಗೊಳ್ಳುತ್ತದೆ. ನಾವು ಸತ್ಪ್ರಜೆಯಾಗಿ, ಉತ್ತಮ ನಾಗರಿಕರಾಗಿ ಬೆಳೆಯಬಹುದು. ಸ್ಕೌಟಿಂಗ್‌ನಲ್ಲಿ ಸಾಹಸಪ್ರಧಾನ ಚಟುವಟಿಕೆಗಳು ಇವೆ. ಆದ್ದರಿಂದ ನನಗೆ ಅದು ಅಚ್ಚು-ಮೆಚ್ಚು.

**Guide : Chaitra S. - Mysore, District**

We can learn more skills in Guiding and it will be useful in our life e.g. Knots, First Aid, Pioneering Projects. We will learn to be responsible citizens. We will come across people from different regions make friends and know languages culture and tradition.

**ಸ್ಕೌಟ್: ರಾಜೇಂದ್ರ ಪ್ರಸಾದ್ - ಮೈಸೂರು ಜಿಲ್ಲೆ**

ಸ್ಕೌಟಿಂಗ್‌ನಿಂದ ಒಳ್ಳೆಯ ನಡವಳಿಕೆಯನ್ನು ಕಲಿಯಬಹುದು. ಬೇರೆ ಜನರಿಗಿಂತ ನಾನು ಒಬ್ಬ ಆದರ್ಶ ಮತ್ತು ವಿನಯವುಳ್ಳ ಸ್ಕೌಟ್ ಎಂಬ ಭಾವನೆಬೆಳೆಯುತ್ತದೆ. ಪ್ರತಿಯೊಬ್ಬರಿಗೂ ತಮ್ಮ ಸುಪ್ತಪ್ರತಿಭೆಗಳನ್ನು ಪ್ರದರ್ಶಿಸಲು ನಾನಾ ಅವಕಾಶಗಳಿರುತ್ತದೆ. ನಮ್ಮ ಜೀವನ ಶೈಲಿಯನ್ನು ಉತ್ತಮವಾಗಿರಿಸಿಕೊಳ್ಳಬಹುದು.

**ಗೈಡ್: ಹಂಸವೇಣಿ - ಮೈಸೂರು**

ಗೈಡಿಂಗ್‌ನಲ್ಲಿ ಪಡೆದ ಜ್ಞಾನವು ನಮ್ಮ ಬದುಕಿಗೆ ಸಹಾಯಕವಾಗುತ್ತದೆ. ಪ್ರಥಮ ಚಿಕಿತ್ಸೆ, ಅಗ್ರಗಾಮಿತ್ವದಂತಹ ವಿಶೇಷ ಜ್ಞಾನವು ನಮ್ಮ ಬುದ್ಧಿ ವಿಕಸನಗೊಳ್ಳುತ್ತದೆ. ಶಿಬಿರವಾಸವಂತೂ ಸಂತೋಷದ ಗಣಿಯಾಗುತ್ತದೆ.

**Guide : Preethi - Mysore District**

I like guiding becuase Guide captain take care and conduct wide games, night games, Treasure Hunt, B.P. Six and Exercise and adventurous activities. We learn to respect elder and senior citizens.

**ಸ್ಕೌಟ್: ಸಾಗರ್ - ಮೈಸೂರು ಜಿಲ್ಲೆ**

ನನಗೆ ಸ್ಕೌಟಿಂಗ್ ಎಂದರೆ ಬಹಳ ಇಷ್ಟ. ಸ್ಕೌಟಿಂಗ್‌ನ ಇನ್ನೊಂದು ಹೆಸರೇ ಶಿಸ್ತು. ನಾವು ಇತರರಿಗಿಂತ ಶಿಸ್ತುಪಾಲನೆ, ನಿಷ್ಠಾವಂತ ಗುಣ ಹಾಗೂ ಧೈರ್ಯವಂತರಾಗುತ್ತೇವೆ. ಇನ್ನೊಬ್ಬರಿಗೆ ಸಹಾಯಮಾಡುವುದರ ಮೂಲಕ ಜೊತೆಜೊತೆಯಾಗಿ, ಒಂದಾಗಿ ಬೆರೆಯುತ್ತೇವೆ.

**ಗೈಡ್ : ಆರ್.ಕೆ. ಘೋರ್ಪಡೆ - ಗದಗ ಜಿಲ್ಲೆ**

ಗೈಡಿಂಗ್‌ನಲ್ಲಿ ಒಳ್ಳೆಯ ತರಬೇತಿಯನ್ನು ಕೊಡುತ್ತಾರೆ. ಮುಕ್ತದಳದ ರ್‍ಯಾಲಿಗಳಿಗೂ ಅವಕಾಶವಿದೆ. ಇಲ್ಲಿ ಯಾವುದೇ ರೀತಿಯ ಭೇದ ಭಾವಗಳಾಗಲಿ, ಮೇಲುಕೀಳೆಂಬುದಾಗಲಿ ಇಲ್ಲವೇ ಇಲ್ಲ. ಎಲ್ಲರೂ ಸಮಾನರು.

**ಗೈಡ್: ಗಾಯತ್ರಿ. ಆನ್. ವನ್ನಾಲ - ಗದಗ ಜಿಲ್ಲೆ**

ಗೈಡಿಂಗ್‌ನಲ್ಲಿ ಮುಖ್ಯವಾಗಿ ಪ್ರಕೃತಿಯನ್ನು, ನೆಲಜಲದ ಸಾರ್ವಜನಿಕ ಆಸ್ತಿ-ಪಾಸ್ತಿಗಳನ್ನು ರಕ್ಷಿಸುವುದನ್ನು ಕಲಿಯುತ್ತೇವೆ. ಶಿಬಿರವಾಸದ ನೆನಪು, ಕಲಿಕೆ ಹಾಡು-ನೃತ್ಯಗಳು, ಶಿಬಿರಾಗ್ನಿ ಕಾರ್ಯಕ್ರಮ ಹಾಗೂ ಸ್ನೇಹಿತೆಯರನ್ನು ಜೀವನದಲ್ಲಿ ಮರೆಯಲಾಗುವುದಿಲ್ಲ.

**ಗೈಡ್: ಸೌಮ್ಯ. ಎಸ್. ಬಡಿಗೇರ್ - ಹಾವೇರಿ ಜಿಲ್ಲೆ**

ಗೈಡಿಂಗ್‌ನ ವಿವಿಧ ಚಟುವಟಿಕೆಗಳೊಂದಿಗೆ ಸರ್ವಧರ್ಮ ಪ್ರಾರ್ಥನೆಯು ನಮ್ಮ ಆಧ್ಯಾತ್ಮಿಕ ಚಿಂತನೆಗೆ ಮನಸ್ಸನ್ನು ಒಳಪಡಿಸುತ್ತದೆ. ಬೇರೆ ಬೇರೆ ಜಿಲ್ಲೆ, ರಾಜ್ಯ, ದೇಶಗಳಿಗೂ ಹೋಗುವ ಅವಕಾಶಗಳಿವೆ. ಜಾನಪದ ಕಲೆಯ ಬಗ್ಗೆಯೂ ತಿಳಿಯುತ್ತೇವೆ. ಅನೇಕ ಸಂಕೇತ (Signals) ಗಳನ್ನು ತಿಳಿದು ಉಪಯೋಗಿಸುತ್ತೇವೆ.

**ಸ್ಕೌಟ್: ರಾಮೇಗೌಡ. ಎಸ್.ಕೆ., ಹಾವೇರಿ ಜಿಲ್ಲೆ**

ಹೊಸ ಹೊಸ ಜ್ಞಾನವನ್ನು ತಿಳಿಯುತ್ತೇವೆ. ದೈಹಿಕ

ಮಾನಸಿಕ ಬೆಳವಣಿಗೆಗೂ ಸ್ಕೌಟಿಂಗ್‌ನಿಂದ ಪ್ರಯೋಜನಗಳಿವೆ. ಬದುಕಿಗೆ ಬೇಕಾದ ಸಾಮಾನ್ಯ ಜ್ಞಾನಗಳ ಅರಿವೂ ಉಂಟಾಗುತ್ತದೆ. ಆಕಸ್ಮಿಕ ದುರ್ಘಟನೆಗಳಿಗೆ ಹೇಗೆ ಪ್ರತಿಕ್ರಮಿಸ ಬೇಕೆಂಬುದನ್ನು ತಿಳಿಸುತ್ತಾರೆ. ಉದಾ: ಬೆಂಕಿಯಿಂದಾಗುವ ಆಕಸ್ಮಿಕ ಅನಾಹುತಗಳನ್ನು ಎದುರಿಸುವ ಬಗ್ಗೆ ಶಿಬಿರಗಳಲ್ಲಿ ತಿಳಿಸುತ್ತಾರೆ.

**ಗೈಡ್ : ಪುಷ್ಪಾ. ಗ. ಹಾಗಾದ - ಧಾರವಾಡ ಜಿಲ್ಲೆ**

ಗೈಡಿಂಗ್‌ನಲ್ಲಿ, ಶಿಬಿರವಾಸದಲ್ಲಿ ನಾವು ಕಾಣುವ ವಿಶೇಷತೆಯೆಂದರೆ ಗೈಡ್ ಕ್ಯಾಪ್ಟನ್‌ಗಳು ತರಬೇತಿದಾರರು ತೋರಿಸುವ ಮಾತೃ ಪ್ರೀತಿ, ಬೆಳೆಸುವ ಆತ್ಮವಿಶ್ವಾಸ, ದೇಹದ ಶುಚಿತ್ವದ ಬಗ್ಗೆಯೂ ತಿಳಿಸುತಾರೆ, ದೇಶಭಕ್ತಿಯನ್ನು ಮೂಡಿಸುತ್ತಾರೆ. ಏಕಾಗ್ರತೆ, ಪರಿಶುದ್ಧತೆ, ಪ್ರಾಮಾಣಿಕತೆ, ಸಂಯಮಗಳನ್ನು ಅಳವಡಿಸಿಕೊಳ್ಳುವ ನಡೆನುಡಿಗಳನ್ನು ತಿಳಿಯುತ್ತೇವೆ.

**ಸ್ಕೌಟ್ : ಸಂಜಯ್. ಜಿ - ದಾವಣಗೆರೆ ಜಿಲ್ಲೆ**

ಕೊಂಡಜ್ಜಿ ಕ್ಯಾಂಪಿನ ನೆನಪು ಇನ್ನೂ ಹಸಿರಾಗಿದೆ. ಪ್ರಕೃತಿ ಮಡಿಲಲ್ಲಿ ನಮ್ಮ ದಿನಚರಿ ಸವಿನೆನಪು. ಮತ್ತೆಮತ್ತೆ ಶಿಬಿರವಾಸಕ್ಕೆ ಹೋಗುವ ಮನಸ್ಸು. ಸ್ಕೌಟ್-ಗೈಡ್ ಸಂಸ್ಥೆಗೆ ನಾವು ಸದಾ ಚಿರಋಣಿಗಳು.

**ಸ್ಕೌಟ್ : ನಂದನ್. ಆರ್ - ದಾವಣಗೆರೆ ಜಿಲ್ಲೆ**

ಸ್ಕೌಟಿಂಗ್ ನಮ್ಮ ಜೀವನವನ್ನು ರೂಪಿಸುತ್ತದೆ. ನಮಗೆ ಒಳ್ಳೆಯ ಗೌರವ ದೊರೆಯುತ್ತದೆ. ವಿವಿಧ ಬಗೆಯ ಸಂಸ್ಕೃತಿ, ಸಂಪ್ರದಾಯ, ಆಚರಣೆಗಳ ಬಗ್ಗೆ ತಿಳಿಯಲು ಅವಕಾಶಗಳಿರುತ್ತದೆ.

**ಗೈಡ್ : ಹರ್ಷಿತ್. ಕೆ. ನಾಯಕ್ - ದಾವಣಗೆರೆ ಜಿಲ್ಲೆ**

ಇಲ್ಲಿಯ ಪಾಠ ಪ್ರವಚನಗಳು ಮಹತ್ತರವಾಗಿರುತ್ತದೆ. ಸ್ನೇಹದ - ಗಟ್ಟಿ ಬಂಧ ಪ್ರಾರಂಭವಾಗುತ್ತದೆ. ಜಾತ್ಯತೀತ ಮನೋಭಾವನೆಯನ್ನು ಬೆಳೆಸುವ ಒಂದು ಚಳವಳಿ. ಹೆಣ್ಣುಮಕ್ಕಳು ಸ್ವರಕ್ಷಣೆ (Self-defence) ಮಾಡಿಕೊಳ್ಳುವ ವಿಧಾನಗಳನ್ನು ತಿಳಿಸುತ್ತಾರೆ. ಧ್ವಜಾರೋಹಣ ಕಾರ್ಯಕ್ರಮವು ಶಿಸ್ತಿನ ಆಕರ್ಷಣೆಯ ಆಚರಣೆಗಳಲ್ಲಿ ಒಂದಾಗಿದೆ.

**ಸ್ಕೌಟ್ : ಅಕ್ಷಯ. ಸಿ. ಚೈ - ದಾವಣಗೆರೆ ಜಿಲ್ಲೆ**

ಗೈಡಿಂಗ್‌ನಿಂದ ಸಮಯ ಪ್ರಜ್ಞೆಯನ್ನು ಕಲಿಯಬಹುದು. ಶಿಕ್ಷಕರಿಂದ ನೀತಿಪಾಠ ಅರಿಯುತ್ತೇವೆ. ಅಪರಿಚಿತರು ಪರಿಚಿತರಾಗಿ ಸ್ನೇಹಿತರಾಗುತ್ತಾರೆ. ರಾಜ್ಯ ಪುರಸ್ಕಾರ, ರಾಷ್ಟ್ರಪತಿ ಗೈಡ್ ಆದ ತಕ್ಷಣ ಅಲ್ಲಿಗೆ ಗೈಡಿಂಗ್ ಮುಗಿಯುವುದಿಲ್ಲ. ಜೀವನಪರ್ಯಂತ ಗೈಡಿಂಗ್ ಜ್ಞಾನದ ಉಪಯೋಗಗಳು ಅಸಂಖ್ಯಾತ. ಈ ಚಳವಳಿಗೆ ಎಲ್ಲರೂ ಬೆಂಬಲ ನೀಡುವಂತಾಗಬೇಕು.



# ಸ್ಕೌಟಿಂಗ್ ಮತ್ತು ಗೈಡಿಂಗ್ ಮುಕ್ತದಳಗಳು–ಅಂದು, ಇಂದು ಮತ್ತು ಮುಂದೆ

ನೇರ ಸಂದರ್ಶನ - ಸಂದರ್ಶಿಸಿರುವವರು - ಆರ್. ಚಂದ್ರಶೇಖರನ್, ಎಲ್.ಟಿ. (ಕಬ್)

*ಇಡೀ ಭೂಖಂಡದಲ್ಲಿ, ಅದೂ [illegible] ಸ್ಕೌಟಿಂಗ್ ಮತ್ತು ಗೈಡಿಂಗ್‌ಗಳ ಯುಗದಲ್ಲಿ ಮುಕ್ತದಳ ಪ್ರಾರಂಭ*

ಸ್ಕೌಟಿಂಗ್‌ನ ಉಗಮ ಮತ್ತು ಸ್ಥಾಪನೆ:

1907ರಲ್ಲಿ ಪಾಕ್ಷಿಕ ಪುರವಣಿಯಾಗಿ ಹೊರಬಂದ ''ಸ್ಕೌಟಿಂಗ್ ಫಾರ್ ಬಾಯ್ಸ್'' ಪುಸ್ತಕವನ್ನೋದಿ ಪ್ರಭಾವಿತರಾದ ಬಾಲಕರು, ಬಾಲಕಿಯರು ಸಣ್ಣ ಗುಂಪುಗಳನ್ನು ಕಟ್ಟಿಕೊಂಡು, ಸ್ಕೌಟಿಂಗ್ ಪ್ರಾರಂಭಿಸಿದರು. ಒಂದು ರೀತಿಯಲ್ಲಿ ಮುಕ್ತ ವಾತಾವರಣದಲ್ಲಿ ಪ್ರಾರಂಭವಾಗಿ ಆಂದೋಲನವು ಬೆಳೆಯುತ್ತಾ ಹೋಯಿತು. ಕಾಲ ಕಳೆದಂತೆ ಬಾಲಕ, ಬಾಲಕಿಯರು ಇದರಿಂದ ಪ್ರಭಾವಿತರಾಗಿರುವುದನ್ನು ಗಮನಿಸಿ, ಸರ್ಕಾರದ ಸೂತ್ರವನ್ನು ಹಿಡಿದ ನಾಯಕರುಗಳು ಚಳವಳಿಯನ್ನು ಪ್ರೋತ್ಸಾಹಿಸುತ್ತಾ ಬಂದರು.

ಈ ಸಂಸ್ಥೆಯ ಆಗಮನಕ್ಕೆ ಕಾರಣರಾದರವರೊಬ್ಬ ಸೈನ್ಯಾಧಿಕಾರಿಗಳು–ರಾಬರ್ಟ್ ಸ್ಟೀಫನ್‌ಸನ್ ಸ್ಮಿತ್ ಬೇಡನ್ ಪೋವೆಲ್ ಆಫ್ ಗಿಲ್‌ವೆಲ್ ಅವರು. ಸ್ಕೌಟುಗಳು ಮತ್ತು ಗೈಡುಗಳಿಗೆ ಅವರು ನೆಚ್ಚಿನ ಬಿ.ಪಿ. ಆದರು. ಇವರು ಸಾಧಾರಣ ಮಧ್ಯಮ ವರ್ಗದ ಕುಟುಂಬದಲ್ಲಿ ಹುಟ್ಟಿ ಕಷ್ಟ ಕಾರ್ಪಣ್ಯಗಳನ್ನೆದುರಿಸಿ ಓದಿನಲ್ಲಿ ಸಾಧಾರಣರಾದರೂ, ವ್ಯವಹಾರ ಚತುರರೂ, ಜಾಣ್ಮೆಯುಳ್ಳವರೂ, ಅನೇಕ ಹವ್ಯಾಸಗಳಲ್ಲಿ ಪರಿಣಿತರೂ, ಕಲಾವಿದರೂ, ವಾಗ್ಮಿಗಳೂ ಆಗಿ, ಸೈನ್ಯದಲ್ಲಿ ಶೀಘ್ರಗತಿಯಲ್ಲಿ ಬಡ್ತಿ ಹೊಂದುತ್ತ ಉನ್ನತ ಪದವಿಗೇರಿದರು.

ತಮ್ಮ ಬಾಲ್ಯ ಹಾಗೂ ಜೀವನದಲ್ಲಿ ತಾವು ಸಂತುಷ್ಟರಾದವರೆಂದೂ, ಸುಖಿಗಳೆಂದೂ, ಇಂದಿನ ಬಾಲಕರು ಅದರಲ್ಲರ್ಧದಷ್ಟಾದರೂ, ಸುಖ, ಸಂತೋಷಗಳನ್ನು ಪಡೆಯಲೆಂದು ತಾವು ಇಚ್ಛಿಸುವುದಾಗಿಯೂ, ಆ ಕಾರಣ ಸ್ಕೌಟ್ ಚಳವಳಿಯನ್ನು ನಿರೂಪಿಸಿದುದಾಗಿಯೂ ಅವರು ತಿಳಿಸಿರುತ್ತಾರೆ. ಅವರಿಗೆ ''ಲಾರ್ಡ್'' ಬಿರುದು ಪ್ರಧಾನ ಪೂರ್ವದಲ್ಲಿ ತಮಗೆ ಬಳುವಳಿಯಾಗಿ ಬಂದ, ಲಂಡನ್ ಸಮೀಪದ, ವಿಶಾಲವಾದ ''ಗಿಲ್‌ವೆಲ್ ಪಾರ್ಕ್'' ಪ್ರದೇಶವನ್ನು ಸಂಸ್ಥೆಗೆ ಧಾರೆಎರೆದ ಮಹನೀಯರಿವರು. ಆ ಗಿಲ್‌ವೆಲ್ ಪಾರ್ಕ್ ಇಂದು ಸಂಸ್ಥೆಯ ಅಂತರರಾಷ್ಟ್ರೀಯ ಅಧ್ಯಯನ ಕೇಂದ್ರವಾಗಿ ಬೆಳೆದಿದೆ.

ಅಂದಿನ ದಿನಗಳಲ್ಲಿ ಬ್ರಿಟಿಷ್, ಸಾಮ್ರಾಜ್ಯಶಾಹಿ ವಿಶ್ವವ್ಯಾಪಿಯಾಗಿತ್ತು. ''ಬ್ರಿಟಿಷ್ ಸಾಮ್ರಾಜ್ಯದಲ್ಲಿ ಸೂರ್ಯನು ಮುಳುಗುವುದೇ ಇಲ್ಲ'' ಎಂಬ ಲೋಕೋಕ್ತಿ ರೂಢಿಯಲ್ಲಿತ್ತು. ಹಾಗಾಗಿ ಇಡೀ ಸಾಮ್ರಾಜ್ಯವು ಸ್ಕೌಟ್ ಗೈಡ್‌ದಳಗಳಿಂದ ತುಂಬಿಹೋಯಿತು. ಅದು ಹಾಗಿರಲಿ, ಲಂಡನ್ ನಗರದಲ್ಲಿ ಒಬ್ಬ ಸ್ಕೌಟ್‌ನ ಪರೋಪಕಾರವು ವಾಣಿಜ್ಯೋದ್ಯಮಿ ''ವಿಲಿಯಂ ಡಿ ಬಾಯ್ಸ್'' ರವರಿಂದ, ಕೃತಜ್ಞತಾಪೂರ್ವಕ ಕೊಡುಗೆಯಾಗಿ ಅಮೆರಿಕಾ ಸಂಯುಕ್ತ ಸಂಸ್ಥಾನಗಳಲ್ಲಿ ಹರಡಲು ಕಾರಣವಾಯಿತು ಸ್ಕೌಟ್‌ಗಣತಿಯಲ್ಲಿ ಇಂದು ಯು.ಎಸ್.ಎ. ಪ್ರಥಮ ಸ್ಥಾನದಲ್ಲಿದೆ. ಭಾರತವೂ, ಅಂದಿನ ದಿನಗಳಲ್ಲಿ ಬ್ರಿಟಿಷ್ ಸಾಮ್ರಾಜ್ಯಶಾಹಿಯ ಭಾಗವಾಗಿತ್ತು 1909ರಲ್ಲಿ ಬೆಂಗಳೂರಿನಲ್ಲಿ ಪ್ರಥಮ ಮುಕ್ತ ಸ್ಕೌಟ್ ದಳದ ಮೂಲಕ ಭಾರತದಲ್ಲಿ ಸ್ಕೌಟಿಂಗ್ ಪ್ರಾರಂಭವಾಯಿತು ಹಾಗಾಗಿ ಭಾರತದ ಸ್ಕೌಟಿಂಗ್ ಏಳಿಗೆಗೆ ಮುಕ್ತದಳಗಳ ಅವಶ್ಯಕತೆ ಬಹಳ ಎಂಬ ಸಂದೇಶವನ್ನು ಸಾರಿದಂತಿತ್ತು. ಆದಿನಗಳಲ್ಲಿ ರೂಢಿಯಲ್ಲಿದ್ದಂತೆ ಅದು ಬ್ರಿಟಿಷರು ಮತ್ತು ಆಂಗ್ಲೋಇಂಡಿಯನ್ ಮಕ್ಕಳಿಗೆ ಸೀಮಿತವಾಗಿದ್ದಿತಲ್ಲದೆ, ದಳಗಳೂ ಸ್ಥಳೀಯ ಸಂಸ್ಥೆಗಳೂ ಲಂಡನ್ನಿನ ಇಂಪೀರಿಯಲ್ ಹೆಡ್‌ಕ್ವಾರ್ಟರ್ಸ್‌ನಲ್ಲಿ ನೋಂದಣಿ ಪಡೆಯಬೇಕಾಗಿದ್ದಿತು. ಅದೇರೀತಿ ಬೆಂಗಳೂರಿನಲ್ಲಿ ಮುಕ್ತದಳವನ್ನು ಪ್ರಾರಂಭಿಸಿದ ಕ್ಯಾಪ್ಟನ್ ಬೇಕರ್ ಅವರು, ಸ್ಥಳೀಯ ಸಂಸ್ಥೆಯನ್ನು ಸಂಘಟಿಸಿ, ಲಂಡನ್ ಐ.ಹೆಚ್.ಕ್ಯೂ. ನಲ್ಲಿ ನೋಂದಣಿ ಮಾಡಿದ್ದರು.

ಕಾಲ ಕಳೆಯುತ್ತಿದ್ದಂತೆ ಭಾರತದಲ್ಲೂ ಸಂಸ್ಥೆಯು ಹರಡಿತು. ಬಿ.ಪಿ.ಯವರಿಂದ ''ಚೀಫ್ ಸ್ಕೌಟ್ ಆಫ್ ಇಂಡಿಯ'' ಎಂದು ಗೌರವಿಸಲ್ಪಟ್ಟ ವಿಶ್ವ ಸ್ಕೌಟಿಂಗ್ ಚರಿತ್ರೆಯಲ್ಲಿ ಏಕಮಾತ್ರದ್ವಿತೀಯರಾದ ಮಹಿಳೆ ಡಾ|| ಅನಿ ಬೆಸೆಂಟ್ ಪಂ|| ಮಾಳವೀಯ, ಪಂ|| ಹೃದಯನಾಥ ಕುಂಜ್ರು, ಮದನ ಮೋಹನ ಪಂ|| ಶ್ರೀರಾಂ ಬಾಜಪಾಯಿ, ಅರುಂಡೇಲ್ ಮುಂತಾದವರ ಪರಿಶ್ರಮದಿಂದ, ಅದು ದೇಶೀಯ ಬಾಲಕರಿಗೂ ಲಭ್ಯವಿರಬೇಕೆಂಬ ಪ್ರತಿಪಾದನೆ ಸಾಕಾರವಾಗಿ 1913–18ರ ಅವಧಿಯಲ್ಲಿ ಎಲ್ಲರಿಗೂ ಮುಕ್ತವಾಗಿ ಸೇವಾ ಸಮಿತಿ ಸ್ಕೌಟ್ಸ್, ಸೌತ್ ಇಂಡಿಯನ್ ಬಾಯ್ಸ್ ಸ್ಕೌಟ್ಸ್, ಮುಂತಾದ ಹಲವಾರು ಧ್ವಜಗಳಡಿ ಬೆಳೆದು ಬಂದಿತು. ಭಾರತದಲ್ಲಿ ಅಂದು ರಾಜಕೀಯವಾಗಿ ಅಸ್ತಿತ್ವದಲ್ಲಿ 560ಕ್ಕೂ ಹೆಚ್ಚು ರಾಜ

ಮಹಾರಾಜರುಗಳು, ನವಾಬರುಗಳ ನಾಯಕತ್ವದಲ್ಲಿ ಆಯಾ ಸಂಸ್ಥಾನಗಳಲ್ಲಿ ಸ್ವತಂತ್ರವಾದ ದೇಶೀಯ ಸಂಸ್ಥೆಗಳೂ ಇದ್ದವು. ಬೆಳೆಯುತ್ತಾ ಪರಿವರ್ತನೆ ಹೊಂದುತ್ತಾ ವ್ಯಾಪಿಸಿದ ಈ ಸಂಸ್ಥೆಗಳಿಗೆ ಭಾರತದಲ್ಲಿ ಒಂದುಗೂಡಿದ ಕೇಂದ್ರ ಕಾರ್ಯಾಲಯದ ಅವಶ್ಯಕತೆ ಇದ್ದಿತು. 1947ರ ಸ್ವಾತಂತ್ರ್ಯದ ವೇಳೆಗೆ ಪ್ರಮುಖವಾಗಿ 4 ಸಂಸ್ಥೆಗಳಿದ್ದವು. ನವದೆಹಲಿಯ ಬಾಯ್ಸ್ ಸ್ಕೌಟ್ಸ್ ಅಸೋಸಿಯೇಷನ್ ಆಫ್ ಇಂಡಿಯಾ, ಇಂಡಿಯನ್ ಗರ್ಲ್ ಗೈಡ್ಸ್ ಅಸೋಸಿಯೇಷನ್, ಹಿಂದೂಸ್ಥಾನ್ ಸ್ಕೌಟ್ಸ್ ಮತ್ತು ನ್ಯಾಷನಲ್ ಅಸೋಸಿಯೇಷನ್. ದೇಶೀಯ ಸಂಸ್ಥಾನಗಳು ತಮ್ಮ ನಾಡಿನ ವೈಶಿಷ್ಟ್ಯವನ್ನು ಉಳಿಸಿಕೊಂಡು, ನವದೆಹಲಿ ರಾಷ್ಟ್ರೀಯ ಸ್ತರದ ಸಂಸ್ಥೆಗಳಲ್ಲಿ ಆಯೋಜಿತವಾಗಿದ್ದುವು. ದೇಶೀಯ ಸಂಸ್ಥಾನಗಳ ಸ್ಕೌಟ್ಸ್-ಗೈಡ್ಸ್ ಸಂಘಟನೆಗಳು 560ಕ್ಕೂ ಹೆಚ್ಚು ಇದ್ದವು.

ಸಾಮ್ರಾಜ್ಯಶಾಹಿಯ ವಿರುದ್ಧವೆನ್ನಿ, ದೇಶಪ್ರೇಮದ ಪರಾಕಾಷ್ಠೆಯೆನ್ನಿ ನ್ಯಾಷನಲ್ ಮತ್ತು ಹಿಂದೂಸ್ಥಾನ್ ಸಂಸ್ಥೆಗಳು ಮುಕ್ತ ಸಂಸ್ಥೆಗಳಾಗಿ, ಸಾರ್ವಜನಿಕ ಪ್ರೋತ್ಸಾಹ ಸಹಕಾರಗಳಿಂದಲೇ ಬೆಳೆದು ಬಂದವು.

ಸ್ವಾತಂತ್ರ್ಯಾನಂತರದಲ್ಲಿ ಮನ್ನಣೆ ಪಡೆದ, ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಸಂಸ್ಥೆಯು ರೂಪುಗೊಂಡಿತು.

**ಮುಕ್ತದಳಗಳು**

ಸಾರ್ವಜನಿಕ, ಸರ್ಕಾರ ಇವುಗಳ ಸಹಕಾರ, ಪ್ರೋತ್ಸಾಹಗಳಿಂದ ಸಂಸ್ಥೆಯು ಬೆಳೆದುದೇನೊ ಸರಿ. ಸಂಸ್ಥೆಯ ಘಟಕಗಳು ಶಾಲೆಗಳಿಗೆ ಮಾತ್ರ ಸೀಮಿತವಾಗದೆ. ಅನೇಕ ಸ್ವತಂತ್ರ ಅಥವಾ ಮುಕ್ತದಳಗಳು ನಾಡಿನ ಅನೇಕ ಕಡೆ. ತಮ್ಮ ಸಮಾಜ ಸೇವೆ ಹಾಗೂ ಕ್ರಿಯಾಶೀಲ ಚಟುವಟಿಕೆಗಳಿಂದ ಹೆಸರು ಪಡೆದಿದ್ದುವು. ನಾಡಿನ ಪ್ರತಿಜಿಲ್ಲೆಯಲ್ಲಿಯೂ ನೆಲೆಗೊಂಡು ಈ ಘಟಕಗಳು, ಸ್ಕೌಟಿಂಗ್‌ನ ಗುಣಮಟ್ಟವನ್ನು ಕಾಪಾಡಿಕೊಂಡು ಬಂದುವು. ಇಂದಿಗೂ ಹಲವು ಮುಕ್ತದಳಗಳು ಗುಣಮಟ್ಟವನ್ನು ಕಾಪಾಡಿಕೊಂಡಿವೆ.

ಬಿ.ಪಿ. ರವರ ಕನಸಿನ ಸ್ಕೌಟಿಂಗ್ ಕಾರ್ಯಕ್ರಮವು ಪೂರ್ಣ ಯಶಸ್ವಿ ಆಗಬೇಕಾದರೆ ಶಾಲಾವಾತಾವರಣ ಹಾಗೂ ಪರಿಸರಕ್ಕಿಂತಲೂ ಮುಕ್ತದಳಗಳ ''ಸುಖೀ ಕುಟುಂಬ'' ದ ಮುಕ್ತ ವಾತಾವರಣವು ಹೆಚ್ಚು ಪರಿಣಾಮಕಾರಿಯಾಗುತ್ತದೆ. 5ನೇ ವಯಸ್ಸಿನಿಂದ ಪ್ರಾರಂಭವಾಗುವ ಸ್ಕೌಟಿಂಗ್ ಜೀವನವು ವ್ಯಕ್ತಿಯ ಕೊನೆಯುಸಿರೆಳೆಯುವ ವರೆವಿಗೂ ಕಲಿಯುತ್ತಾ, ಕಲಿಸುತ್ತಾ, ಸೇವೆಗೈಯುತ್ತಾ ಒಂದೇಸೂರಿನಡಿ ಕ್ರಿಯಾಶೀಲವಾಗಿರಲು, ಗುಣಮಟ್ಟವನ್ನು ಕಾಪಾಡಿಕೊಂಡು ಬರಲು ಸಾಧ್ಯವಾಗುತ್ತದೆ. ಸಮಾಜದ ಗಣ್ಯರೂ, ತಾಯಿತಂದೆಯರೂ ಭಾಗವಹಿಸಲು, ಹೇಳಿಮಾಡಿಸಿದಂತಹ ವಾತಾವರಣವು, ಮುಕ್ತ ದಳಗಳಲ್ಲಿರುತ್ತದೆ. 1939ರಲ್ಲಿ ಮರಿಯಾಗಿ ಸಂಸ್ಥೆಗೆ ಮೈಸೂರು ಜಯಾಸ್‌ನಲ್ಲಿ ಸೇರಿದ ನಾನು ತುಮಕೂರಿನ ಹನುಮಾನ್ಸ್ ನಲ್ಲಿ ಮಹಾರಾಜ ಸ್ಕೌಟ್ ಆಗಿ, ಸ್ಕೌಟರ್ ಆಗಿ ಮುಂದೆ ಬೆಂಗಳೂರು ಚಾಮುಂಡೀಸ್‌ನಲ್ಲಿ ರೋವರ್ ಆಗಿ ಕೆಲಕಾಲ ಇದ್ದು, ಇದೀಗ ಅದೇ ಚಾಮುಂಡೀಸ್‌ನಲ್ಲಿ ರೋವರ್ ಲೀಡರ್ ಆಗಿದ್ದೇನೆ. ಈ ಮಧ್ಯೆ ಚಿತ್ರದುರ್ಗ, ದಾವಣಗೆರೆ, ಗುಲ್ಬರ್ಗ ಮತ್ತು ಕೋಲಾರಗಳಲ್ಲಿ ಮುಕ್ತದಳಗಳನ್ನು ನಡೆಸಿದ್ದೇನೆ. ರಾಷ್ಟ್ರಪ್ರಶಿಕ್ಷಣ ಕೇಂದ್ರ ಪಚಮಡಿ ಹಾಗೂ ಅಹಮದಾಬಾದ್, ಪಾಟ್ನಾ ಮತ್ತು ದೆಹಲಿಗಳಲ್ಲಿ ರಾಷ್ಟ್ರಕಛೇರಿಗಾಗಿ ಕಿಂಚಿತ್ ಸೇವೆ ಸಲ್ಲಿಸಿ, ಈಗ ಸುಮಾರು 16 ವರ್ಷಗಳಿಂದಲೂ ರಾಜ್ಯ ಕಛೇರಿಗೆ ಯಥಾಶಕ್ತಿ ಸೇವೆ ಸಲ್ಲಿಸುತ್ತಿದ್ದೇನೆ. ಇದೆಲ್ಲವೂ ಮುಕ್ತದಳಗಳಲ್ಲಿ ನನಗೆ ದೊರೆತ ಶಿಕ್ಷಣ ಹಾಗೂ ಭದ್ರ ಬುನಾದಿಯ ಪ್ರಭಾವವೇ ಆಗಿದೆ.

ನಾನು ಸ್ಕೌಟ್ ಆಗಿದ್ದ ಅದಕ್ಕೂ ಮುಂಚಿನ ದಿನಗಳಲ್ಲಿ ಮೈಸೂರು ಸಂಸ್ಥಾನದ ಪ್ರತಿ ಜಿಲ್ಲೆಯಲ್ಲಿಯೂ ಹಲವಾರು (ಕನಿಷ್ಠ ಒಂದು) ಮುಕ್ತ ದಳಗಳು ಪ್ರಸಿದ್ಧಿಯಾಗಿದ್ದವು, ಉದಾ: ಚಿತ್ರದುರ್ಗದ ''ಮದಕರಿ ನಾಯಕ ರೋವರ್ಸ್;'' ಶಿವಮೊಗ್ಗದ ''ಮಲ್ನಾಡ್ ರೋವರ್ಸ್'', ಕೋಲಾರದ ''ಕೃಷ್ಣರಾಜೇಂದ್ರ ರೋವರ್ಸ್''; ತುಮಕೂರಿನ ''ಹನುಮಾನ್ ಮತ್ತು ಏಕಲವ್ಯ ದಳಗಳು''; ಹುಳಿಯಾರಿನ ''ಶ್ರೀರಾಮ ಗ್ರೂಪ್; ಬೆಂಗಳೂರಿನ ಸಲಾವುದ್ದೀನ್; ಕೆನಡಿ; ಫ್ರೀ ಇಂಡಿಯಾ; ದಳಗಳು, ಹೀಗೆ ಅದೆಷ್ಟೋ ಮುಕ್ತದಳಗಳು ಸ್ಕೌಟಿಂಗ್‌ನ ಗುಣಮಟ್ಟಕ್ಕೆ ಹೆಸರುವಾಸಿ ಆಗಿದ್ದುವು.

ಇವುಗಳಲ್ಲಿ ಶಿಕ್ಷಣ ಪಡೆದ ಅನೇಕ ಮಕ್ಕಳು-ಮರಿಗಳು, ಸ್ಕೌಟುಗಳು, ರೋವರ್‌ಗಳು, ತಮ್ಮ ವೃತ್ತಿ ಕ್ಷೇತ್ರಗಳಲ್ಲಿ ರಾಷ್ಟ್ರೀಯ ಅಂತರರಾಷ್ಟ್ರೀಯ ಖ್ಯಾತಿಗಳಿಸಿರುತ್ತಾರೆ. ತಮ್ಮ ಮೂಲ ನೆಲೆಗೆ ಇಂದಿಗೂ ವರ್ಷಕ್ಕೊಮ್ಮೆ ಬಂದು ''ಮಿಲನ'' ಕಾರ್ಯಕ್ರಮ ಗಳನ್ನೇರ್ಪಡಿಸಿ, ತಮ್ಮ ಬಾಲ್ಯದ ಅನುಭವಗಳನ್ನು ಮೆಲುಕು ಹಾಕುತ್ತಾರೆ. ತಮ್ಮ ಏಳಿಗೆಗೆ ಕಾರಣರಾದ ಗುರುಗಳನ್ನು ನೆನೆಯುತ್ತಾರೆ, ಕೃತಜ್ಞತೆಗಳನ್ನರ್ಪಿಸುತ್ತಾರೆ.

ಈ ಗುಂಪುಗಳನ್ನು ಸ್ಥಾಪಿಸಿ ನಡೆಸುತ್ತಿದ್ದ ಅನೇಕ ಗುರುವರ್ಯರುಗಳನ್ನು ಹೆಸರಿಸಲಾಗದಿದ್ದರೂ ಶ್ರೀ ಯುತರುಗಳಾದ ಶಿರೂರು (ಶ್ರೀಜಯ ಚಾಮರಾಜ

